ಸಮಾಜ ಪುಸ್ತಕಮಾಲೆ, ಧಾರವಾಡ.

# ಹೇಮಾಂಗಿನಿ

[ದಿವಂಗತ ಶರತ್‌ಬಾಬುಗಳ ಚಿಕ್ಕ ಕಾದಂಬರಿ]



ಕನ್ನಡಿಸಿದವರು

ಎಂ. ಎ. ಕುಪ್ಪಮ್ಮ





ಸಾದಾ ಪ್ರತಿ ೨ ಆಣೆ ] [ ಸುಂದರ ಪ್ರತಿ ೩ ಆಣೆ

ಸಂಪಾದಕರು ಮತ್ತು ಪ್ರಕಾಶಕರು :

ಬಾಲಚಂದ್ರ ಘಾಣೇಕರ

ಪ್ರಕಾಶನ ಸ್ಥಳ :

ಕವಿರಾಜ ಕಾರ್ಯಾಲಯ, ಧಾರವಾಡ

ಮುಂದಿನ ಪುಸ್ತಕ

ಮಂಗಲ ಸೂತ್ರ

( ಶ್ರೀ ಗುರುನಾಥ ಜೋಶಿ )

ಮುದ್ರಕರು :

ಆರ್. ಎಸ್. ಹುಕ್ಕೇರಿಕರ

ವಸಂತ ಮುದ್ರಣಾಲಯ ಧಾರವಾಡ

# ಮುನ್ನುಡಿ.

ಈ ಚಿಕ್ಕ ಪುಸ್ತಕವು ಸುಪ್ರಸಿದ್ಧ ಕಾದಂಬರಿಕಾರರಾದ ದಿವಂಗತ ಶರಚ್ಚಂದ್ರ ಚಟ್ಟೋಪಾಧ್ಯಾಯರ 'ಮಝುಲೀ ದೀದೀ' ಎಂಬ ಚಿಕ್ಕ ಕಾದಂಬರಿಯ ಅನುವಾದವು. ಇದರ ಅನುವಾದಕರು ಸಹೋದರಿ ಎಂ. ಎ. ಕುಪ್ಪಮ್ಮ ಅವರು. ಇವರು ಮದ್ರಾಸದ 'ರಾಷ್ಟ್ರಭಾಷಾ ವಿಶಾರದ' ಪರೀಕ್ಷೆಯಲ್ಲಿ ಉತ್ತಮ ರೀತಿಯಿಂದ ಉತ್ತೀರ್ಣರಾಗಿದ್ದಾರೆ: ಕನ್ನಡ ಮತ್ತು ಹಿಂದೀ ಭಾಷೆಗಳಲ್ಲಿ ಚೆನ್ನಾಗಿ ಬರೆಯಬಲ್ಲವರಾಗಿದ್ದಾರೆ. ಇವರ ಲೇಖನಗಳು 'ಹಂಸ', 'ದಕ್ಷಿಣ ಭಾರತ' ಮೊದಲಾದ ಹಿಂದೀ ಪತ್ರಿಕೆಗಳಲ್ಲಿಯೂ 'ಚಿತ್ರಾ', 'ವಿಶ್ವ ಭಾರತಿ', 'ಸರಸ್ವತಿ' ಮೊದಲಾದ ಕನ್ನಡ ಪತ್ರಿಕೆಗಳಲ್ಲಿಯೂ ಪ್ರಕಟವಾಗಿ ಜನಾದರಣೆಗೆ ಪಾತ್ರವಾಗಿವೆ. ಕಾಶಿಯಿಂದ ಹೊರಡುತ್ತಲಿರುವ ಗಲ್ಪ-ಸಂಸಾರ ಮಾಲೆಯಲ್ಲಿ ನನ್ನಿಂದ ಸಂಪಾದಿತವಾದ ಕನ್ನಡ ಕತೆಗಳ ಸಂಗ್ರಹವೊಂದು ಹಿಂದೀ ಭಾಷೆಯಲ್ಲಿ ಪ್ರಸಿದ್ಧವಾದುದು ಕನ್ನಡಿಗರಿಗೆ ತಿಳಿದಿರಲು ಸಾಕು. ಅದರಲ್ಲಿ ಕರ್ನಾಟಕದ ಸುಪ್ರಸಿದ್ಧ ಹದಿನಾಲ್ಕು ಕತೆಗಾರ ಕತೆಗಳು ಪ್ರಕಟವಾಗಿವೆ. ಅವುಗಳಲ್ಲಿ ಕೆಲವನ್ನು ಇವರು ಅನುವಾದಿಸಿದ್ದಾರೆ. ಶ್ರೀ. ದಿವಾಕರ ರಂಗನಾಥರಾಯರ 'ಅಂತರಾತ್ಮನಿಗೆ' ಮತ್ತು 'ಕರ್ಮಯೋಗ' ಗಳನ್ನು ಹಿಂದಿಯಲ್ಲಿ ಅನುವಾದಿಸಿದ್ದಾರೆ. ಕನ್ನಡನಾಡಿನಲ್ಲಿ ಲೇಖಿಕೆಯರು ಕಡಮೆಯಿದ್ದ ಕಾಲದಲ್ಲಿ ಈ ಲೇಖಿಕೆಯರು ಸಾಹಿತ್ಯ ಸೇವೆಗೆ ಮುಂದೆ ಬಂದುದು ಅಭಿನಂದನೀಯವು. ಕನ್ನಡ ಜನತೆಗೆ ಇವರ ಪರಿಚಯವನ್ನು ಮಾಡಿಕೊಡುವ ಸಂದರ್ಭವು ಒದಗಿದುದಕ್ಕಾಗಿ ನನಗೆ ಅತ್ಯಂತ ಸಂತೋಷವೆನಿಸುತ್ತದೆ. ಶರತ್‌ಬಾಬುಗಳ ಎಲ್ಲ ಕೃತಿಗಳನ್ನು ಕನ್ನಡದಲ್ಲಿ ತರಬೇಕೆಂಬ ಹಿರಿಯಾಸೆಯುಳ್ಳ ನನಗೆ ಇವರು ಕೆಲವುಗಳನ್ನು ಅನುವಾದಿಸಿ ಕೊಟ್ಟು ನನ್ನ ಮೇಲಿದ್ದ ಭಾರವನ್ನು ಕಡಮೆ ಮಾಡಿದ್ದಕ್ಕಾಗಿ ನಾನು ಇವರನ್ನು ಅಭಿನಂದಿಸದೆ ಇರಲಾರೆ.

ನಮಗೆ ಶರತ್‌ಬಾಬುಗಳ ಎಲ್ಲ ಕೃತಿಗಳನ್ನು ಕನ್ನಡದಲ್ಲಿ ಅನುಮೋದಿಸಲು ಅನುಮತಿಯನ್ನು ಕೊಟ್ಟ ಮುಂಬಯಿಯ 'ಹಿಂದೀ ಗ್ರಂಥ ರತ್ನಾಕರ ಕಾರ್ಯಾಲಯದ' ಒಡೆಯರಿಗೆ ನಮ್ಮ ಅಭಿನಂದನೆಗಳು.

ಧಾರವಾಡ
೨೦-೯-೧೯೩೯

**ಗುರುನಾಥ ಜೋಶಿ**

# ಸಂಪಾದಕರ ನುಡಿ

---

ಈ ಮೊದಲು ನಾನು "ಸಮಾಜೋನ್ನತೀ ಪುಷ್ಪಮಾಲೆ"ಯೆಂಬ ಹೆಸರಿನಲ್ಲಿ ಒಂದಾಣೆ ಬೆಲೆಯ ಅನೇಕ ಪುಸ್ತಕಗಳನ್ನು ಪ್ರಸಿದ್ಧಪಡಿಸಿದ್ದು ಎಲ್ಲರಿಗೂ ಗೊತ್ತಿರಬಹುದು. ಅವುಗಳು ಎರಡೆರಡು ಮೂರುಮೂರು ಆವೃತ್ತಿಯನ್ನು ಕಂಡುದು ಕನ್ನಡಿಗರ ಪ್ರೋತ್ಸಾಹನದಿಂದಲೇ ಅಲ್ಲವೇ? ಇದೀಗ ಅನೇಕರ ಸಲಹೆಯ ಮೇರೆಗೆ ತೀರ ಚಿಕ್ಕ ಪುಸ್ತಕಗಳಿಗಿಂತಲೂ ಕೊಂಚ ದೊಡ್ಡ ಪುಸ್ತಕಗಳನ್ನೇ ಪ್ರಕಟಿಸುವದು ಲೇಸೆಂದು ಬಗೆದು "ಸಮಾಜ ಪುಸ್ತಕ ಮಾಲೆ"ಯ ಹೆಸರಿನಲ್ಲಿ ಇದೀಗ ಈ ಎರಡಾಣೆ ಮಾಲೆಯನ್ನು ಹೊರಡಿಸಲು ನಿರ್ಧರಿಸಿದ್ದೇನೆ. ಈ ನನ್ನ ಹೊಸ ಉಪಕ್ರಮಕ್ಕೆ ಅನೇಕರು ನೆರವಾಗುವದಾಗಿ ಆಶ್ವಾಸನವಿತ್ತಿದ್ದಾರೆ.

ನನ್ನ ಬಿನ್ನಹವನ್ನು ಮನ್ನಿಸಿ ದಿವಂಗತ ಶರತ್‌ಬಾಬುಗಳದೊಂದು ಚಿಕ್ಕ ಕಾದಂಬರಿಯನ್ನು ಕು. ಕುಪ್ಪಮ್ಮನವರು ಕನ್ನಡಿಸಿ ಕೊಟ್ಟರು. ಅದೇ ಮೇರೆಗೆ ಶ್ರೀ. ಗುರುನಾಥ ಜೋಶಿಯವರಾದರೂ ಮುಂದಿನ ಸಲಕ್ಕೊಂದು ಕಾದಂಬರಿಯನ್ನು ಕೊಡುವುದಾಗಿ ತಿಳಿಸಿರುವರು. ಇವರಿಬ್ಬರಿಗೂ ನಾನು ತುಂಬಾ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ಶರತ್‌ಸಾಹಿತ್ಯವನ್ನೆಲ್ಲ ಭಾಷಾಂತರ ಮಾಡುವ ಅಪ್ಪಣೆಯನ್ನು ಪಡೆದುಕೊಂಡ ಶ್ರೀ. ಗುರುನಾಥ ಜೋಶಿಯವರೇ ಈ ಪುಸ್ತಕಕ್ಕೆ ಮುನ್ನುಡಿ ಬರೆದುಕೊಟ್ಟದ್ದು ಇನ್ನೂ ಒಂದು ಸಂತೋಷದ ಸಂಗತಿಯೆನ್ನಬಹುದು. ಶ್ರೀ. ಜೋಶಿಯವರು ಈ ಮೊದಲು ಶರತ್ ಸಾಹಿತ್ಯದ ಸವಿಯನ್ನು ಕನ್ನಡಿಗರಿಗೆ ಸವಿಸಿದ್ದಲ್ಲದೆ ಮುಂದಾದರೂ ಸವಿಸಬೇಕೆಂದು ಯತ್ನಿಸುತ್ತಿದ್ದಾರೆ. ಶ್ರೀ. ಗುರುನಾಥ ಜೋಶಿ ಹಾಗು ಕು. ಕುಪ್ಪಮ್ಮನವರಂತೆ ಉಳಿದ ಲೇಖಕರಾದರೂ ನನ್ನ ಕಾರ್ಯದಲ್ಲಿ ಸಹಕಾರ ನೀಡುವರಾಗಿ ಕೋರುತ್ತೇನೆ.

**ಬಾಲಚಂದ್ರ ಘಾಣೇಕರ**

# ಹೇಮಾಂಗಿನಿ

—— 0 ——

ಕೃಷ್ಣನ ತಾಯಿ ಅನೇಕ ಕಷ್ಟಗಳನ್ನನುಭವಿಸಿ, ಕಡಲೆ ಪುರಿ ಹುರಿದು ಮಾರಿ, ತೀರ ಬಡತನದಿಂದ ಹಾಗೂ ಹೀಗೂ ಅವನನ್ನು ಹದಿನಾಲ್ಕು ವರ್ಷ ವಯಸನ್ನಾಗಿ ಮಾಡಿ ಪರಲೋಕವನ್ನು ಸೇರಿದಳು. ಕೃಷ್ಣನಿಗೆ ಈಗ ಇರಲು ಎಲ್ಲೂ ಸ್ಥಳವಿಲ್ಲದಾಯಿತು. ಅವನ ದೊಡ್ಡಕ್ಕ (ಮಲತಾಯಿಯ ಮಗಳು) ಕಾದಂಬಿನಿಯ ಸ್ಥಿತಿಗತಿಗಳು ಸ್ವಲ್ಪ ಉತ್ತಮವಾಗಿದ್ದುವು. ಆದ್ದರಿಂದ ಎಲ್ಲರೂ ಕೃಷ್ಣನಿಗೆ "ಕೃಷ್ಣ! ನೀನು ನಿಮ್ಮ ದೊಡ್ಡಕ್ಕನ ಮನೆಯಲ್ಲಿ ಹೋಗಿ ಇರು. ಅವರು ಹಣವಂತರು. ನೀನು ಅಲ್ಲಿ ಬಹಳ ಸುಖದಿಂದಿರಬಹುದು." ಎಂದು ಬೋಧಿಸತೊಡಗಿದರು.

ಮಾತೃಶೋಕದಿಂದ ಅತ್ತು ಅತ್ತು ಕೃಷ್ಣನಿಗೆ ಬಹಳ ಜ್ವರ ಬಂದು ಬಿಟ್ಟಿತು. ಕಡೆಗೆ ಜ್ವರ ವಾಸಿಯಾದ ನಂತರ ಅಲ್ಲಿ ಇಲ್ಲಿ ಭಿಕ್ಷೆ ಬೇಡಿ, ಮಾತೆಯ ಶ್ರಾದ್ಧವನ್ನು ನೆರವೇರಿಸಿದ. ಬಳಿಕ ತನ್ನ ಮುಂಡನ ಮಾಡಿಸಿದ ತಲೆಯ ಮೇಲೆ ಸಣ್ಣದೊಂದು ಗಂಟನ್ನಿರಿಸಿಕೊಂಡು, ರಾಜಕೋಟೆಯಲ್ಲಿದ್ದ ದೊಡ್ಡಕ್ಕನ ಮನೆಯನ್ನು ಸೇರಿದ. ಅಕ್ಕನಿಗೆ ಅವನ ಗುರುತ್ತಿತ್ತು. ಅವನು ಅಲ್ಲಿಗೆ ಬಂದ ಕಾರಣವನ್ನರಿತು ಅವಳ ಮೈಯೆಲ್ಲಾ ಬೆಂಕಿಯಾಯಿತು. ತನ್ನ ಮಕ್ಕಳು-ಮರಿಗಳೊಡನೆ ತಾನು ಸಂತೋಷದಿಂದ ಸಂಸಾರ ನಡೆಸುತ್ತಿರುವಾಗ ಈ ಹಾಳು ಶನಿಯ ಉಪದ್ರವ ಎಲ್ಲಿಂದ ಬಂತೆಂದು ಅವಳ ಕೋಪಕ್ಕೆ ಮಿತಿಯೇ ಇಲ್ಲದಾಯಿತು!

ಕೃಷ್ಣನಿಗೆ ಮನೆಯ ಹಾದಿಯನ್ನು ತೋರಿಸಲು ಅವನ ಸಂಗಡ ಬಂದಿದ್ದ ಆ ಊರಿನ ವೃದ್ಧನೊಡನೆ ಒಂದೆರಡು ಕಟುವಾಕ್ಯಗಳನ್ನಾಡಿ, ಕಾದಂಬಿನಿಯು "ಭಲೆ! ಕವಳ ಕತ್ತರಿಸುವುದಕ್ಕೆ ಇನ್ನು ನನ್ನ ತಮ್ಮನನ್ನು ಕರೆದುಕೊಂಡು

ಬಂದಿರಲ್ಲವೇ, ಪಾಪ!" ಎಂದಳು. ಬಳಿಕ ತನ್ನ ಮಲತಾಯಿಯನ್ನುದ್ದೇಶಿಸಿ "ಜೀವದಿಂದಿರುವ ವರೆಗೂ ಏನೆಂದು ವಿಚಾರಿಸಲಿಲ್ಲ. ಪಾಪ, ಈಗ ಮಗನನ್ನು ಕಳುಹಿಸಿ ವಿಚಾರಿಸಿಕೊಳ್ಳುತ್ತಿರುವಳಲ್ಲವೇ! ಹುಂ! ಕಂಡವರ ಹುಡುಗನ ತಂಟೆ ನನಗೆ ಬೇಡಪ್ಪಾ; ಅವನನ್ನು ಹಿಂತಿರುಗಿ ಕರೆದುಕೊಂಡು ಹೋಗಿ!" ಎಂದಳು

ವೃದ್ಧನು ಕುಲದಿಂದ ಹಜಾಮು. ಕೃಷ್ಣನ ತಾಯಿಯಲ್ಲಿ ಅವನಿಗೆ ಅಪಾರವಾದ ಶ್ರದ್ಧಾ ಭಕ್ತಿಗಳಿದ್ದುವು. ಆಕೆಯನ್ನು ಅವನು 'ಅಮ್ಮಾ' ಎಂದೇ ಕರೆಯುತ್ತಿದ್ದ. ಅವನು ಕಾದಂಬಿನಿಯನ್ನು ಅಷ್ಟಕ್ಕೇ ಬಿಡಲಿಲ್ಲ. ಒಂದೆರಡು ಒಳ್ಳೆಯ ಮಾತುಗಳನ್ನಾಡಿ, ಅವಳನ್ನು ಸ್ವಲ್ಪ ಸ್ತುತಿಗೈದು "ತಂಗೀ! ನಿನ್ನ ಮನೆಯು ಲಕ್ಷ್ಮಿಯ ಭಂಡಾರವಾಗಿದೆ. ಎಷ್ಟೋ ಜನ ದಾಸ ದಾಸಿಯರು, ಅತಿಥಿ-ಭಿಕ್ಷುಕರು, ನಾಯಿ ನರಿಗಳು ನಿನ್ನ ಮನೆಯಲ್ಲಿ ತಿಂದು ತೇಗಿ ತೃಪ್ತಿಗೊಳ್ಳುವರು. ಅವರಂತೆಯೇ ಈ ಬಾಲಕನೂ ಒಂದು ಹಿಡಿ ಅನ್ನವನ್ನು ತಿಂದುಕೊಂಡು ಎಲ್ಲೋ ಹೊರಗಡೆ ಬಿದ್ದಿರುವನು. ನಿನಗೆ ಅವನಿಂದ ಯಾವ ತೊಂದರೆಯೂ ಇಲ್ಲ. ಅವನಿರುವ ಸುಳಿವು ಸಹ ನಿನಗೆ ತಿಳಿಯುವುದಿಲ್ಲ, ,ಬಹಳ ಶಾಂತ ಸ್ವಭಾವದ ಹುಡುಗ, ಬಲು ಬುದ್ಧಿವಂತ. ನೀನು ಅವನನ್ನು ತಮ್ಮನೆಂದು ಭಾವಿಸಿ ಆಶ್ರಯ ಕೊಡದಿದ್ದರೂ ಯಾವನೋ ಒಬ್ಬ ಅನಾಥ ಬ್ರಾಹ್ಮಣ ಹುಡುಗನೆಂದು ತಿಳಿದು ಅವನಿಗೆ ಸ್ವಲ್ಪ ಆಶ್ರಯ ಕೊಟ್ಟು ಕಾಪಾಡು ತಂಗೀ!" ಎಂದು ಹೇಳಿದ.

ಅವನ ಈ ಸ್ತುತಿಯಿಂದ ಪೋಲೀಸ್ ನೌಕರನ ಮನಸ್ಸು ಸಹ ಕರಗಿ ಹೋಗುವಂತಿತ್ತು. ಅಂದ ಬಳಿಕ ಕಾದಂಬಿನಿಯಂತಹ ಸ್ತ್ರೀಯ ಮನಸ್ಸು ಕರಗದಿರುವುದು ಆಶ್ಚರ್ಯವೇ! ಅಂತೂ, ಆ ಸಮಯದಲ್ಲಿ ಅವಳು ಏನೂ ಮಾತನಾಡದೆ ಸುಮ್ಮನಿದ್ದಳು. ವೃದ್ಧನು ಕೃಷ್ಣನನ್ನು ಮರೆಗೆ ಕರೆದುಕೊಂಡು ಹೋಗಿ, ಕೆಲವು ಬುದ್ಧಿ ಮಾತುಗಳನ್ನು ಹೇಳಿಕೊಟ್ಟು ನಂತರ ಕಣ್ಣೊರಸಿ ಕೊಳ್ಳುತ್ತ ಅಲ್ಲಿಂದ ಹೊರಬಿದ್ದ.

ಕೊನೆಗೆ ಕೃಷ್ಣನಿಗೆ ಆಶ್ರಯ ದೊರಕಿತು.

ಕಾದಂಬಿನಿಯ ಪತಿಯಾದ ನವೀನಚಂದ್ರ ಮುಕರ್ಜಿಯು ಅಕ್ಕಿ ಬೇಳೆಯ ದೊಡ್ಡದೊಂದು ಮಂಡಿಯನ್ನಿಟ್ಟುಕೊಂಡಿದ್ದ. ಮಂಡಿಯಿಂದ

ಮನೆಗೆ ಹನ್ನೆರಡು ಗಂಟೆಗೆ ಊಟಕ್ಕಾಗಿ ಹಿಂತಿರುಗಿದಾಗ ಅವನು ಕೃಷ್ಣನ ಕಡೆಗೆ ವಕ್ರ ದೃಷ್ಟಿಯಿಂದ ನೋಡುತ್ತ "ಇವನು ಯಾರು ?" ಎಂದು ಕೇಳಿದ.

ಕಾದಂಬಿನಿಯು ಮುಖ ಗಂಟಿಕ್ಕಿಕೊಂಡು "ಪಾಪ, ನಿಮ್ಮ ಸ್ವಂತ ಬಂಧುವಲ್ಲವೇ ? ಅವನಿಗೆ ಉಡಿಸಿ–ತೊಡಿಸಿ, ಉಣಿಸಿ–ತಿನ್ನಿಸಿ ಕಾಪಾಡಿರಿ; ದೊಡ್ಡವನನ್ನಾಗಿ ಮಾಡಿರಿ—ನಿಮ್ಮ ಪರಲೋಕದ ಹಾದಿಯು ಸುಗಮವಾಗುವುದು !" ಎಂದಳು.

ನವೀನನಿಗೂ ತನ್ನ ಮಲಅತ್ತಿಗೆಯ ಮೃತ್ಯುವಿನ ಸಮಾಚಾರ ಮೊದಲೇ ತಿಳಿದಿತ್ತು. ಆದ್ದರಿಂದ ಅವನು ಎಲ್ಲವನ್ನೂ ಮನದಲ್ಲಿ ಊಹಿಸಿಕೊಂಡು "ಸರಿಯೆ ! ಹುಡುಗ ಒಳ್ಳೆಯ ಸುಂದರನಾಗಿದ್ದಾನೆ, ಅಲ್ಲದೆ ಪುಷ್ಟಕಾಯನಾಗಿದ್ದಾನೆ." ಎಂದ.

"ಪುಷ್ಟಿಯಿಂದಿರದೆ ಮತ್ತೇನು ? ತಂದೆಯವರು ಬಿಟ್ಟು ಹೋಗಿದ ಅಲ್ಪ–ಸ್ವಲ್ಪ ದುಡ್ಡು–ಕಾಸನ್ನೂ ಇವನ ಹೊಟ್ಟೆಗೇ ತುಂಬಿರುವಳು ಆ ನೀಚಳು! ನನಗೆ ಒಂದು ಕಾಸನ್ನು ಸಹ ತೋರಿಸಲಿಲ್ಲ !" ಎಂದಳು ಕಾದಂಬಿನಿ.

ಅವಳ ತಂದೆಯ ಆಸ್ತಿಯೆಂದರೆ ಕೇವಲ ಒಂದು ಚಿಕ್ಕ ಗುಡಿಸಲು ಮತ್ತು ಒಂದು ನಿಂಬೆಯ ಹಣ್ಣಿನ ಗಿಡ. ಹಾಗೂ ಹೀಗೂ ಆ ವಿಧವೆಯು ಆ ಗುಡಿಸಲಿನಲ್ಲೇ ತಲೆಮರೆಸಿಕೊಂಡು, ನಿಂಬೆಯ ಹಣ್ಣುಗಳನ್ನು ಮಾರಿದ ದುಡ್ಡಿನಿಂದ ಹುಡುಗನ ಸ್ಕೂಲು ಫೀಜನ್ನು ಕೊಟ್ಟು ಕಾಲ ತಳ್ಳಿದಳು.

ನವೀನನು ಕ್ರೋಧವನ್ನು ಅಡಗಿಸಿಕೊಂಡು "ಒಳ್ಳೆಯದು" ಎಂದ.

"ಒಳ್ಳೆಯದಲ್ಲದೆ ಕೆಟ್ಟದ್ದೇನು ? ಪಾಪ, ನಿಮ್ಮ ಹತ್ತಿರದ ಬಂಧುವಲ್ಲವೇ ? ಅವನನ್ನೂ ಮನೆಯವರಂತೆ ಇಟ್ಟುಕೊಳ್ಳಬೇಕು. ನಮ್ಮ ಪಾಚು-ಗೋಪಾಲರಂತೆಯೇ ಇವನನ್ನೂ ಕಾಣದಿದ್ದರೆ ನಮಗೆ ಊರಿನ ಜನರಿಂದ ಬರುವ ಕೆಟ್ಟ ಹೆಸರನ್ನು ಕೇಳಬೇಕಾದೀತು ! ಅಂತೂ ಈ ಶನಿಯಿಂದ ನಮ್ಮ ಮಕ್ಕಳಿಗೆ ಕಷ್ಟ !" ಎನ್ನುತ್ತ ಕಾದಂಬಿನಿಯು ಪಕ್ಕದ ಮನೆಯ ಒಂದು ಕೋಣೆಯಲ್ಲಿನ ತೆರೆದಿದ್ದ ಕಿಟಕಿಯ ಕಡೆಗೆ ಕ್ರೋಧ–ಪೂರ್ಣ ನೇತ್ರಗಳಿಂದ ನೋಡಿದಳು. ಆ ಮನೆಯು ಅವಳ ನಡುಕಲ ಓರಗಿತ್ತಿಯಾದ ಹೇಮಾಂಗಿನಿಯದಾಗಿತ್ತು.

ಅತ್ತ ಕೃಷ್ಣ ಮೌನದಿಂದ ತಲೆತಗ್ಗಿಸಿ ಅಂಗಳದಲ್ಲಿ ನಿಂತಿದ್ದ. ನಾಚಿಕೆಯಿಂದ ಅವನ ಪ್ರಾಣವೇ ಹೋದಂತಿತ್ತು. ಕಾದಂಬಿನಿಯು ಉಗ್ರಾಣವನ್ನು ಪ್ರವೇಶಿಸಿ, ಒಂದು ತೆಂಗಿನ ಚಿಪ್ಪಿನಲ್ಲಿ ಸ್ವಲ್ಪ ಎಣ್ಣೆಯನ್ನು ತಂದು ಕೃಷ್ಣನ ಒಳಿಯಲ್ಲಿರಿಸಿ "ಇನ್ನು ಸುಮ್ಮಸುಮ್ಮನೆ ಅತ್ತು–ಕರೆಯುವುದರಿಂದ ಪ್ರಯೋಜನವಿಲ್ಲ. ಹೋಗು, ಕೆರೆಯಲ್ಲಿ ಸ್ನಾನ ಮಾಡಿ ಬಾ! ನಿನಗೆ ಸುಗಂಧ–ತೈಲಗಳನ್ನು ಹಚ್ಚಿಕೊಳ್ಳುವ ಅಭ್ಯಾಸವಿಲ್ಲವಷ್ಟೆ?" ಎಂದು ಹೇಳಿ, ಸ್ವಲ್ಪ ಜೋರಾಗಿ ತನ್ನ ಪತಿಯನ್ನು ಕರೆದು "ನೀವು ಸ್ನಾನ ಮಾಡಲು ಕೆರೆಗೆ ಹೋದರೆ ಈ ಬಾಬುವನ್ನೂ ಸ್ವಲ್ಪ ಸಂಗಡ ಕರೆದುಕೊಂಡು ಹೋಗಿ! ಎಲ್ಲಿಯಾದರೂ ಮುಳುಗಿ–ಗಿಳಿಗಿ ಹೋದರೆ ಮನೆಯವರ ಕೈಗೆಲ್ಲಾ ಬೇಡಿ ಬಿದ್ದವು!" ಎಂದಳು ಕೋಪದಿಂದ.

ಕೃಷ್ಣ ಊಟಮಾಡಲು ಕುಳಿತಿದ್ದ. ಸ್ವಭಾವತಃ ಅವನು ಸ್ವಲ್ಪ ಹೆಚ್ಚಾಗಿ ಅನ್ನವನ್ನು ತಿನ್ನುತ್ತಿದ್ದ. ಅದರಲ್ಲಿ ಈಗ ಮೂರು ದಿನಗಳಿಂದ ಹೊಟ್ಟೆಗೇನೂ ಇಲ್ಲ; ಸಾಲದುದಕ್ಕೆ ಅಷ್ಟು ದೂರ ನಡೆದು ಬೇರೆ ಬಂದಿದ್ದ. ಹೊತ್ತೂ ಸಹ ಬಹಳವಾಗಿತ್ತು ಹೀಗೆ ಅನೇಕ ಕಾರಣಗಳಿಂದ ಅವನಿಗೆ ಹಸಿವೆ ಬಹಳವಾಗಿತ್ತು. ತಟ್ಟೆಯಲ್ಲಿ ಬಡಿಸಿದ್ದ ಅನ್ನವೆಲ್ಲವನ್ನೂ ಉಂಡರೂ ಅವನ ಹಸಿವೆ ಹಿಂಗಲಿಲ್ಲ. ನವೀನನೂ ಪಕ್ಕದಲ್ಲೇ ಊಟಮಾಡುತ್ತ ಕುಳಿತಿದ್ದ. ಕೃಷ್ಣನ ತಟ್ಟೆ ಖಾಲಿಯಾಗಿದ್ದುದನ್ನು ಕಂಡು ಅವನು "ಕೃಷ್ಣನಿಗೆ ಸ್ವಲ್ಪ ಅನ್ನ ತಂದು ಬಡಿಸು." ಎಂದ.

"ತರುವೆನು" ಎಂದು ಕಾದಂಬಿನಿಯು ಎದ್ದು ಒಳಕ್ಕೆ ಹೋಗಿ, ಒಂದು ದೊಡ್ಡ ತಟ್ಟೆಯ ತುಂಬ ಅನ್ನವನ್ನು ತಂದು ಕೃಷ್ಣನ ತಟ್ಟೆಗೆ ಎಲ್ಲವನ್ನೂ ಸುರಿದುಬಿಟ್ಟಳು. ಬಳಿಕ ಗಟ್ಟಿಯಾಗಿ ನಗುತ್ತ "ಇನ್ನಾದರೂ ಸಾಕಾಯಿತೇ? ನಿತ್ಯ ನಿತ್ಯವೂ ಈ ರಾಕ್ಷಸನ ಹೊಟ್ಟೆಗೆ ತುಂಬುವುದೆಲ್ಲಿಂದ! ಆಯಿತು, ನಮ್ಮ ಮಂಡಿಯೇ ಖಾಲಿಯಾದಂತಿದೆ! ಸಾಯಂಕಾಲಕ್ಕೆ ಅಂಗಡಿಯಿಂದ ಒಂದು ಪಲ್ಲ ದಪ್ಪ ಅಕ್ಕಿಯನ್ನು ಕೊಟ್ಟು ಕಳುಹಿಸಿರಿ. ಇಲ್ಲವಾದರೆ ನಾವು ಉಳಿಯುವಂತಿಲ್ಲ; ಈಗಲೆ ಹೇಳಿರುವೆನು" ಎಂದಳು.

ಮರ್ಮಾಂತಿಕ ಲಜ್ಜೆಯಿಂದ ಕೃಷ್ಣನ ಮುಖ ಮತ್ತಷ್ಟು ತಗ್ಗಿತು.

ಅವನು ತನ್ನ ಮಾತೆಯ ಏಕಮಾತ್ರ ಪುತ್ರ. ಆ ಮಾತೆಯು ತನ್ನ ಮುದ್ದು ಮಗನಿಗೆ ಸಣ್ಣಕ್ಕಿ ಅನ್ನವನ್ನೇ ತಿನ್ನಿಸುತ್ತಿದ್ದಳೋ ಇಲ್ಲವೋ ಹೇಳಲಾರೆವು. ಆದರೂ ಹೊಟ್ಟೆತುಂಬ ಅನ್ನವನ್ನುಣ್ಣುವ ಅಪರಾಧಕ್ಕಾಗಿ ಅಪಮಾನದಿಂದ ಎಂದೂ ತಲೆತಗ್ಗಿಸಬೇಕಾಗುತ್ತಿರಲಿಲ್ಲವೆಂಬುದು ಮಾತ್ರ ನಿಜ! ಆ ಸಮಯದಲ್ಲಿ ಅವನಿಗೆ ತನ್ನ ಮಾತೆಯ ಕೈಯ ಊಟವೇ ನೆನಪಿಗೆ ಬಂದಿತು ಆಹಾ, ಎಷ್ಟು ತಿಂದರೂ ತೃಪ್ತಿಯೇ ಇಲ್ಲ! ಒಂದು ದಿನ ಬೆಲ್ಲ ಮತ್ತು ಇತರ ಕೆಲವು ಸಾಮಾನುಗಳನ್ನು ತರಲು ಅಂಗಡಿಗೆ ಹೋಗಬೇಕಾಗಿದ್ದಾಗ ಮಾತೆಯ ಕೈಯಿಂದ ಮತ್ತೆರಡು ತುತ್ತು ಅನ್ನವನ್ನು ತಿಂದ ಹೊರತು ತಾನು ಸ್ಥಳ ಬಿಟ್ಟು ಕದಲದಿದ್ದ ಮಾತು ಅವನ ಜ್ಞಾಪಕಕ್ಕೆ ಬಂತು.

ಅವನ ಎರಡು ಕಣ್ಣುಗಳಿಂದಲೂ ಪಟಪಟನೆ ಅಶ್ರು ಬಿಂದುಗಳು ತಟ್ಟೆಯೊಳಕ್ಕೆ ಉದುರತೊಡಗಿದುವು. ಅವನು ಅದೇ ಅನ್ನವನ್ನು ಮಾತನಾಡದೆ ಸುಮ್ಮನೆ ತಿನ್ನತೊಡಗಿದ. ಎಡಗೈಯನ್ನೆತ್ತಿ ಕಣ್ಣೀರನ್ನು ಒರೆಸಿಕೊಳ್ಳುವಷ್ಟು ಸಾಹಸ ಸಹ ಅವನಿಗಾಗಲಿಲ್ಲ. ಸ್ವಲ್ಪ ಹೊತ್ತಿನ ಮುಂಚೆ ತಾನೇ ಅವನ ಸುಮ್ಮಸುಮ್ಮನೆ ಅತ್ತ ಅಪರಾಧಕ್ಕಾಗಿ ಅಕ್ಕನಿಂದ ಕಟುವಾಕ್ಯಗಳನ್ನು ಕೇಳಿದ್ದ. ಆ ಕಟುವಾಕ್ಯಗಳೇ ಅವನ ಅಂತಹ ಅಪಾರವಾದ ಮಾತೃಶೋಕವನ್ನು ಸಹ ಅದುಮಿರಿಸಿದುವು.

## ೨

ಇಬ್ಬರು ಅಣ್ಣತಮ್ಮಂದಿರೂ ಪೈತೃಕ ಗೃಹವನ್ನು ಭಾಗಮಾಡಿಕೊಂಡು ಬೇರೆ ಬೇರೆ ಇರುತ್ತಿದ್ದರು.

ಪಕ್ಕದ ಎರಡಂತಸ್ತಿನ ಮನೆಯೇ ನಡುಕಲ ಸೋದರನಾದ ವಿಪಿನನದು. ಕಡೆಯ ಸೋದರನು ಬಹಳ ದಿನಗಳ ಮುನ್ನವೇ ಮೃತಿಯನ್ನೈದಿದ್ದ. ವಿಪಿನನನೂ ತನ್ನ ಅಣ್ಣನಂತೆ ಅಕ್ಕಿ–ಬೇಳೆಯ ಮಂಡಿಯನ್ನಿಟ್ಟುಕೊಂಡಿದ್ದ. ಅವನ ಸ್ಥಿತಿ-ಗತಿಗಳೂ ಸಾಕಷ್ಟು ಉತ್ತಮವಾಗಿದ್ದುವು. ಆದರೂ ನವೀನನಷ್ಟು ಉತ್ತಮವಾಗಿರಲಿಲ್ಲ. ಅಷ್ಟಾದರೂ ಅವನ ಮನೆ ಮಾತ್ರ ಎರಡಂತಸ್ತಿನದು.

ಆವನ ಪತ್ನಿಯಾದ ಹೇಮಾಂಗಿನಿಯು ಪಟ್ಟಣದ ಹುಡುಗಿ. ಮನೆಯಲ್ಲಿ ದಾಸ ದಾಸಿಯರನ್ನಿಟ್ಟುಕೊಂಡು ನಾಲ್ಕಾರು ಜನ ಅತಿಥಿ-ಅಭ್ಯಾಗತರಿಗೆ ಊಟ-ಉಪಚಾರಗಳನ್ನು ಮಾಡಿಸಿ, ಸಂತೋಷದಿಂದ ಇರಬೇಕೆಂಬ ಪ್ರಕೃತಿಯವಳು. ದುಡ್ಡನ್ನು ಉಳಿಸಿ-ಉಳಿಸಿ ಜಿಪುಣತನದಿಂದ ಜೀವಿಸುವುದು ಅವಳಿಗಿಷ್ಟವಿರಲಿಲ್ಲ. ನಾಲ್ಕು ವರ್ಷಗಳ ಹಿಂದೆ ಇದೇ ವಿಚಾರವಾಗಿ ಮಾತುಕತೆ ನಡೆದು, ಇಬ್ಬರು ಓರಗಿತ್ತಿಯರೂ ಜಗಳವಾಡಿಕೊಂಡು ಬೇರೆ ಬೇರೆಯಾಗಿದ್ದರು. ಅಂದಿನಿಂದ ಇದುವರೆಗೆ ಇಬ್ಬರೂ ಎಷ್ಟೋ ಬಾರಿ ಜಗಳವಾಡಿದ್ದರು, ಪುನಃ ಒಂದಾಗಿದ್ದರು; ಅಷ್ಟಾದರೂ ಮನೋಮಾಲಿನ್ಯ ಮಾತ್ರ ಇಬ್ಬರ ಮನದಲ್ಲೂ ಮನೆ ಮಾಡಿಕೊಂಡೇ ಇತ್ತು. ಎಷ್ಟೇ ಆಗಲಿ, ಕಾದಂಬಿನಿ ದೊಡ್ಡವಳು. ಅಲ್ಲದೆ ಮಾತಿನಲ್ಲಿ ಚತುರೆ. ಒಡೆದು ಹೋದ ಮಡಕೆಯನ್ನು ಪುನಃ ಜೋಡಿಸಲಾಗುವುದಿಲ್ಲವೆಂಬುದನ್ನು ಅವಳು ಚೆನ್ನಾಗಿ ಅರಿತಿದ್ದಳು. ಚಿಕ್ಕವಳಾದ ಹೇಮಾಂಗಿನಿಯು ಮಾತಿನಲ್ಲಿ ಅಷ್ಟು ನಿಪುಣೆಯಲ್ಲ. ಅವಳಿಗೆ ಈ ಬಗೆಯ ಯೋಚನೆಗಳು ಸಹ ಬಾರವು. ಜಗಳ ಆರಂಭವಾಗುತ್ತಿದ್ದುದೇನೋ ಹೇಮಾಂಗಿನಿಯಿಂದಲೇ; ಆದರೂ ಪುನಃ ಒಂದಾಗಲು, ಮಾತನಾಡಲು, ಪರಸ್ಪರ ಊಟ-ಉಪಚಾರಾದಿಗಳನ್ನು ಮಾಡಲು ಅವಳ ಮನವು ತಳಮಳಿಸತೊಡಗುತ್ತಿತ್ತು. ಕಡೆಗೆ ಒಂದು ದಿನ ಅವಳೇ ಕಾದಂಬಿನಿಯ ಮನೆಗೆ ಹೋಗಿ ಅತ್ತು ಕರೆದು, ಕ್ಷಮೆ ಬೇಡಿಕೊಂಡು, ಪುನಃ ತನ್ನ ಮನೆಗೆ ಕರೆದುಕೊಂಡು ಹೋಗಿ ಸ್ನೇಹಮಾಡಿಕೊಳ್ಳುತ್ತಿದ್ದಳು. ಇದೇ ರೀತಿ ಇಷ್ಟು ದಿನಗಳು ಕಳೆದಿದ್ದುವು.

ಒಂದು ದಿನ ಸುಮಾರು ಮಧ್ಯಾಹ್ನ ಮೂರು-ಮೂರೂವರೆ ಗಂಟೆಯಾಗಿರಬಹುದು. ಹೇಮಾಂಗಿನಿಯು ಕಾದಂಬಿನಿಯ ಮನೆಗೆ ಬಂದಳು. ಬಾವಿಯ ಬಳಿ ಸಿಮೆಂಟಿನ ಚಾವಡಿಯ ಮೇಲೆ ಬಿಸಿಲಲ್ಲಿ ಕುಳಿತು, ಒಂದು ರಾಶಿ ಬಟ್ಟೆಯನ್ನು ಸಾಬೂನು ತಿಕ್ಕಿ ಒಗೆಯುತ್ತಿದ್ದ ಕೃಷ್ಣ. ಕಾದಂಬಿನಿಯು ದೂರದಲ್ಲಿ ನಿಂತು, ಸ್ವಲ್ಪ ಸಾಬೂನನ್ನು ತಿಕ್ಕಿ ಬಲವಾಗಿ ಉಜ್ಜಿ, ಬಟ್ಟೆಯನ್ನು ಬೆಳ್ಳಗೆ ಮಾಡುವ ಕೌಶಲವನ್ನು ಹೇಳಿಕೊಡುತ್ತಿದ್ದಳು. ಅವಳು ಹೇಮಾಂಗಿನಿಯನ್ನು ನೋಡುತ್ತಲೇ "ಅಬ್ಬಬ್ಬ! ಎಂತಹ ಕೊಳಕು ಬಟ್ಟೆಯನ್ನು ಹಾಕಿಕೊಂಡು ಬಂದಿರುವನಮ್ಮಾ ಈ ಹುಡುಗ?" ಎಂದಳು.

ಮಾತೇನೋ ನಿಜವೇ ಆಗಿತ್ತು. ಕೃಷ್ಣನಂತೆ ಕೆಂಪು ಅಂಚಿನ ಪಂಚೆಯನ್ನುಟ್ಟು, ಮೇಲೊಂದು ದುಪಟಿಯನ್ನು ಹೊದೆದು ಯಾರೂ ನೆಂಟರಿಷ್ಟರ ಮನೆಗೆ ಹೋಗುವುದಿಲ್ಲ. ಅವನು ಆ ಎರಡು ಬಟ್ಟೆಗಳನ್ನು ಮಾತ್ರ ಅಗತ್ಯವಾಗಿ ಒಗೆಯಬೇಕಾಗಿತ್ತು. ಆದರೆ ಅಗಸರವನು ಬಾರದೇ ಇದ್ದ ಕಾರಣದಿಂದ ಆ ಎರಡು ಬಟ್ಟೆಗಳ ಜೊತೆಗೆ ಪಾಚು–ಗೋಪಾಲರ ಎರಡು ಜೊತೆ ಬಟ್ಟೆ ಮತ್ತು ನವೀನನ ಎರಡು ಜೊತೆ ಬಟ್ಟೆಗಳೂ ಇದ್ದುವು. ಕೃಷ್ಣ ಅವುಗಳಿಗೆಲ್ಲ ಸಾಬೂನು ಉಜ್ಜಿ ಒಗೆಯುತ್ತಿದ್ದ. ಹೇಮಾಂಗಿನಿಯು ಬಟ್ಟೆಗಳನ್ನು ನೋಡಿ ಕೂಡಲೆಯೇ ಅವುಗಳು ಯಾರವೆಂಬುದನ್ನು ತಿಳಿದುಕೊಂಡಳು. ಆದರೂ ಆ ವಿಚಾರವಾಗಿ ಏನೂ ಮಾತನಾಡದೆ "ಅಕ್ಕ! ಈ ಹುಡುಗ ಯಾರು?" ಎಂದು ಕೇಳಿದಳು.

ಆದರೆ ಅವಳು ಮನೆಯಲ್ಲಿ ಮರೆಗೆ ನಿಂತು ಮೊದಲೇ ಎಲ್ಲವನ್ನೂ ಕೇಳಿಕೊಂಡಿದ್ದಳು. ಕಾದಂಬಿನಿಯು ಉತ್ತರ ಕೊಡದೆ ಹಿಂದು ಮುಂದು ನೋಡಿದ್ದನ್ನು ಕಂಡು ಹೇಮಾಂಗಿನಿಯು "ಹುಡುಗ ಬಹಳ ಸುಂದರನಾಗಿರುವನು. ಮುಖದ ಹೋಲಿಕೆಯೆಲ್ಲಾ ಬಹುಮಟ್ಟಿಗೆ ನಿಮ್ಮಂತೆಯೇ ಇದೆ. ನಿಮ್ಮ ತವರು ಮನೆಯ ಕಡೆಯವರು ಯಾರೋ ಇರಬಹುದಲ್ಲವೇ?" ಎಂದು ಕೇಳಿದಳು.

ಕಾದಂಬಿನಿಯು ವಿರಕ್ತ ಗಂಭೀರ ಭಾವದಿಂದ "ಹೌದು, ನನ್ನ ತಮ್ಮ (ಮಲತಾಯಿಯ ಮಗ)" ಎಂದು ನುಡಿದು ಕೃಷ್ಣನನ್ನುದ್ದೇಶಿಸಿ "ಕೃಷ್ಣ! ನಿಮ್ಮ ಅಕ್ಕನಿಗೆ ನಮಸ್ಕಾರ ಮಾಡು. ಛೀ, ಎಂತಹ ಅಸಭ್ಯನೋ ನೀನು? ದೊಡ್ಡವರಿಗೆ ನಮಸ್ಕಾರ ಮಾಡಬೇಕು ಎಂಬುದನ್ನು ಸಹ ನಿನ್ನ ಅಭಾಗಿನಿ ಮಾತೆ ನಿನಗೆ ಕಲಿಸಿ ಕೊಡಲಿಲ್ಲವೇ?" ಎಂದಳು.

ಕೃಷ್ಣ ಗಾಬರಿಯಿಂದ ಮಾಡುತ್ತಿದ್ದ ಕೆಲಸವನ್ನು ಬಿಟ್ಟು ಎದ್ದು ಬಂದು, ಕಾದಂಬಿನಿಗೆ ನಮಸ್ಕಾರ ಮಾಡಲು ಬಗ್ಗಿದ. ಅದನ್ನು ಕಂಡು ಕಾದಂಬಿನಿಯು ಅವನನ್ನು ಗದ್ದರಿಸಿ "ಛೀ, ಕತ್ತೆ! ಎಂತಹ ಹುಚ್ಚನೋ! ಕಿವಿ ಕೇಳಿಸುವುದಿಲ್ಲವೇ ನಿನಗೆ? ಯಾರಿಗೆ ನಮಸ್ಕಾರ ಮಾಡೆಂದು ಹೇಳಿದೆ? ಯಾರಿಗೆ ಮಾಡುತ್ತಿರುವೆ?" ಎಂದಳು.

ಬಂದಾಗಿನಿಂದಲೂ ಒಂದೇ ಸಮನೆ ತಿರಸ್ಕಾರ ಹಾಗೂ ಅಪಮಾನಗಳ ಅವಿಶ್ರಾಂತ ಆಘಾತಗಳನ್ನು ಹೊಂದಿ ಹೊಂದಿ ವಾಸ್ತವವಾಗಿ ಕೃಷ್ಣನ ಬುದ್ಧಿ

ಸ್ಥಿಮಿತದಲ್ಲೇ ಇರಲಿಲ್ಲ. ಅವಳ ಆ ಕಟುವಾಕ್ಯಗಳಿಂದ ವ್ಯಾಕುಲಗೊಂಡ ಕೃಷ್ಣನಿಗೆ ದಿಕ್ಕು ತೋರದಾಯಿತು. ಕೃಷ್ಣ. ಆದರೂ ಹೇಮಾಂಗಿನಿಯ ಬಳಿಗೆ ಬಂದು ಅವಳಿಗೆ! ನಮಸ್ಕರಿಸಿದ. ಒಡನೆಯೇ ಹೇಮಾಂಗಿನಿಯು ಅವನ ಕೈಹಿಡಿದೆತ್ತಿ "ಇರಲಿ ಮಗೂ, ಏಳು! ದೀರ್ಘಾಯುಷ್ಮಂತನಾಗಿರು" ಎಂದು ಆಶೀರ್ವಾದ ಮಾಡಿದಳು.

ಕೃಷ್ಣ ದಿಗ್ಮೂಢನಾಗಿ ಅವಳ ಮುಖವನ್ನು ನೋಡುತ್ತ ನಿಂತ. "ಈ ದೇಶದಲ್ಲಿ ಇಂತಹ ಒಳ್ಳೆಯ ಮಾತನ್ನಾಡುವ ಮನುಷ್ಯರೂ ಇರುವರೇ?" ಎಂದು ಅವನು ಯೋಚಿಸತೊಡಗಿದ.

ಅವನ ಆ ಕುಂಠಿತ, ಭಯಭೀತ, ಅಸಹಾಯ ಮುಖವನ್ನು ಕಂಡು ಹೇಮಾಂಗಿನಿಯ ಹೃದಯ ಕರಗಿ ನೀರಾಯಿತು. ಅವಳಿಗೆ ತಡೆಯಲಾಗದ ದುಃಖ ಉಕ್ಕಿ ಬಂತು. ಒಡನೆಯೇ ಅವಳು ಆ ಅನಾಥ ಬಾಲಕನನ್ನು ಹತ್ತಿರ ಕರೆದು ಬಿಗಿದಪ್ಪಿಕೊಂಡಳು ಮತ್ತು ಬೆವರಿನಿಂದ ನೆನೆದು ಹೋಗಿದ್ದ ಅವನ ಪರಿಶ್ರಾಂತ ಮುಖವನ್ನು ತನ್ನ ಸೀರೆಯ ಸೆರಗಿನಿಂದ ಒರೆಸುತ್ತ ಕಾದಂಬಿನಿಯನ್ನು ಕುರಿತು "ಅಕ್ಕ! ಇವನ ಕೈಲಿ ಬಟ್ಟೆ ಒಗೆಸುವುದೇ? ಆಳನ್ನು ಕರೆಸಿಕೊಳ್ಳಬಾರದಾಗಿತ್ತೇ?" ಎಂದು ಕೇಳಿದಳು.

ಕಾದಂಬಿನಿ ಅವಾಕ್ಕಾದಳು. ಅವಳಿಗೆ ಏನೂ ಉತ್ತರ ಕೊಡಲು ತೋರಲಿಲ್ಲ. ಸ್ವಲ್ಪ ಹೊತ್ತಿನ ನಂತರ ಅವಳು "ಹೇಮಾ! ನಾನು ಮನೆಯಲ್ಲಿ ಹತ್ತಾರು ಜನ ಆಳು, ಕಾಳುಗಳನ್ನಿಟ್ಟುಕೊಳ್ಳಲು ನಿನ್ನಷ್ಟು ಸಾಹುಕಾರಿಯಲ್ಲ." ಎಂದಳು.

ಅವಳ ಈ ಮಾತಿನ ಕಡೆ ಧ್ಯಾನ ಕೊಡದೆ ಹೇಮಾಂಗಿನಿಯು ತನ್ನ ಮನೆಯ ಕಡೆ ತಿರುಗಿ ಮಗಳನ್ನು ಕರೆದು "ಉಮಾ! ಶಿವನನ್ನು ಸ್ವಲ್ಪ ಇಲ್ಲಿಗೆ ಕಳುಹಿಸು. ಭಾವನವರ ಮತ್ತು ಪಾಚು–ಗೋಪಾಲರ ಕೊಳೆ ಬಟ್ಟೆಗಳನ್ನು ಕೆರೆಗೆ ಕೊಂಡೊಯ್ದು, ಒಗೆದು ಒಣಗಿಸಲಿ!" ಎಂದು ಹೇಳಿದಳು.

ಬಳಿಕ ಕಾದಂಬಿನಿಯ ಕಡೆಗೆ ತಿರುಗಿ ಅಕ್ಕ! ಈ ದಿನ ಸಂಜೆಗೆ ಕೃಷ್ಣ ಮತ್ತು ಪಾಚು–ಗೋಪಾಲರು ನಮ್ಮ ಮನೆಗೇ ಊಟಕ್ಕೆ ಬರಲಿ. ಸ್ಕೂಲಿನಿಂದ ಬಂದ ಕೂಡಲೇ ಅವರನ್ನು ಅಲ್ಲಿಗೆ ಕಳುಹಿಸಿ ಕೊಡಿ. ಅದುವರೆಗೂ ನಾನು ಇವನನ್ನು ಕರೆದುಕೊಂಡು ಹೋಗುವೆನು." ಎಂದಳು.

ಬಳಿಕ ಕೃಷ್ಣನನ್ನು ಕುರಿತು "ಕೃಷ್ಣ! ಇವರಂತೆಯೇ ನಾನೂ ನಿನ ಗೊಬ್ಬ ಅಕ್ಕ. ಬಾ, ನನ್ನ ಸಂಗಡ ಬಾ" ಎಂದು ಹೇಳಿ ಕೃಷ್ಣನ ಕೈ ಹಿಡಿದು ಕೊಂಡು ತನ್ನ ಮನೆಗೆ ಕರೆದುಕೊಂಡು ಹೋದಳು.

ಕಾದಂಬಿನಿಯೂ ಬೇಡವೆನ್ನಲಿಲ್ಲ. ಹೇಮಾಂಗಿನಿಯಾಡಿದ ಎಲ್ಲ ಮಾತು ಗಳನ್ನೂ ಸಹಿಸಿಕೊಂಡು ಏನೂ ಮರುಮಾತಾಡದೆ ಅವಳು ಸುಮ್ಮನಿದ್ದಳು. ಏನೇ ಇರಲಿ, ಅಂತೂ ಸಂಜೆಯ ಅವನ ಊಟದ ಖರ್ಚು ಉಳಿಯಿತೆನ್ನು ವುದೇ ಅವಳು ಸುಮ್ಮನಿದ್ದುದರ ಕಾರಣ. ಕಾದಂಬಿನಿಗೆ ಪ್ರಪಂಚದಲ್ಲಿ ದುಡ್ಡಿ ಗಿಂತ ಹೆಚ್ಚೆನಿಸಿದ ವಸ್ತುವಾವುದೂ ಇರಲಿಲ್ಲ. ಆದ್ದರಿಂದ, "ಹಸು ಒದ್ದರೂ ಚಿಂತೆಯಿಲ್ಲ-ಹಾಲು ಕೊಟ್ಟರೆ ಸರಿ" ಎನ್ನುವ ಸ್ವಭಾವ ಅವಳದಾಗಿದ್ದಿತು.

೩

ಸಂಜೆಯ ಸಮಯದಲ್ಲಿ ಕಾದಂಬಿನಿಯು "ಕೃಷ್ಣ, ಏನೇನು ತಿಂದು ಬಂದೆ?" ಎಂದು ಕೇಳಿದಳು.

ಕೃಷ್ಣನು ಅತ್ಯಂತ ನಾಚಿಕೆಯಿಂದ ತಲೆತಗ್ಗಿಸಿ "ಪೂರಿ" ಎಂದ.

"ಪೂರಿಯನ್ನು ಯಾತರ ಜೊತೆಗೆ ತಿಂದೆ?"

ಕೃಷ್ಣ ಅದೇ ರೀತಿ ತಲೆ ತಗ್ಗಿಸಿಕೊಂಡು ನಾಚಿಕೆಯಿಂದ "ಮೀನಿನ ತರಕಾರಿ, ಸಂದೇಶ, ರಸಗುಲ್ಲಾ...." ಎಂದ.

"ಛು! ನಾನು ಕೇಳುತ್ತಿರುವುದು ಹೇಮಾಂಗಿನಿಯು ಮೀನಿನ ತರಕಾರಿ ಯನ್ನು ಯಾರ ತಟ್ಟೆಯಲ್ಲಿ ಬಡಿಸಿದ್ದಳು? ಎಂದು"

ಹಠಾತ್ತಾಗಿ ಅವಳ ಈ ಪ್ರಶ್ನೆಯನ್ನು ಕೇಳಿ ಕೃಷ್ಣನ ಮುಖ ವಿವರ್ಣ ವಾಯಿತು. ಕೊಲ್ಲಲಿಕ್ಕೆ ಸಿದ್ಧವಾಗಿರುವ ಶಸ್ತ್ರದ ಮುಂದೆ ಹಗ್ಗದಿಂದ ಬಿಗಿ ದಿರಿಸಿದ ಪಶುವಿನಂತಾಯಿತು ಕೃಷ್ಣನ ಹೃದಯದ ಪರಿಸ್ಥಿತಿ! ಕೃಷ್ಣನು ಉತ್ತರ ಕೊಡದೆ ಸುಮ್ಮನಿದ್ದುದನ್ನು ಕಂಡು ಕಾದಂಬಿನಿಯು ಪುನಃ "ನಿನ್ನ ತಟ್ಟೆ ಯಲ್ಲೇ ಬಡಿಸಿದ್ದಳೇನೋ?" ಎಂದು ಕೇಳಿದಳು.

ಕೃಷ್ಣ ಮಹಾಪರಾಧಿಯಂತೆ ಮರು ಮಾತಾಡದೆ ಸುಮ್ಮನೆ ತಲೆ ತಗ್ಗಿಸಿದ.

ಬಳಿಯಲ್ಲೇ ಅಂಗಳದಲ್ಲಿ ಕುಳಿತು ನವೀನ ಹುಕ್ಕಾ ಸೇದುತ್ತಿದ್ದ. ಕಾದಂಬಿನಿಯು " ಕೇಳುತ್ತಿರುವಿರಾ ? " ಎಂದು ಕೇಳಿದಳು.

ನವೀನನು ಸಂಕ್ಷೇಪದಲ್ಲಿ ಕೇವಲ " ಹುಂ " ಎಂದು ಪುನಃ ಹುಕ್ಕಾ ಸೇದತೊಡಗಿದ.

ಕಾದಂಬಿನಿಯು ಕೋಪದಿಂದ " ನೋಡಿದಿರಾ, ಈ ಸ್ವಂತ ಚಿಕ್ಕಮ್ಮನ ವ್ಯವಹಾರ ? ನಮ್ಮ ಪಾಚು-ಗೋಪಾಲರಿಗೆ ಮೀನಿನ ತರಕಾರಿ ಎಷ್ಟು ಇಷ್ಟ ವೆಂಬುದು ಅವಳಿಗೇನು ಗೊತ್ತಿಲ್ಲವೇ ? ಅಷ್ಟು ತಿಳಿದೂ ತಿಳಿಯೂ ಇವನ ತಟ್ಟೆಗೇ ಎಲ್ಲವನ್ನೂ ಹಾಕಿ ವ್ಯರ್ಥ ಮಾಡಿದಳೇಕೆ ? ಏನೋ ಕೃಷ್ಣ, ಸಂದೇಶ ಮತ್ತು ರಸಗುಲ್ಲವನ್ನು ಹೊಟ್ಟೆ ತುಂಬುವಷ್ಟು ತಿಂದೆಯಲ್ಲವೇ ? ಏಳು ಜನ್ಮ ದಲ್ಲಿಯೂ ನೀನು ಅಂತಹ ಪದಾರ್ಥಗಳನ್ನು ನೋಡಿರಲಾರೆ ! " ಎಂದಳು.

ಪುನಃ ಅವಳು ಪತಿಯ ಕಡೆಗೆ ನೋಡಿ " ಒಂದು ಹಿಡಿ ಅನ್ನ ಸಹ ಗತಿಯಿಲ್ಲದವನಿಗೆ ಪೂರಿಯಂತೆ, ಸಂದೇಶವಂತೆ ! ಆದರೆ ನಾನೀಗಲೇ ಹೇಳಿರು ವೆನು, ಹೇಮಾಂಗಿನಿಯು ಕೃಷ್ಣನನ್ನು ಕೆಡಿಸದೆ ಹೋದರೆ ನೀವು ನನ್ನನ್ನು ಬೇಕಾದ ಹೆಸರಿನಿಂದ ಕೂಗಿ ! " ಎಂದಳು.

ಇಷ್ಟಾದರೂ ನವೀನ ಮಾತನಾಡದೆ ಸುಮ್ಮನಿದ್ದ. ಇಂತಹ ದುರ್ಘ ಟನೆಯಾಗುವುದೆಂದು ನಂಬಲು ಅವನಿಂದ ಸಾಧ್ಯವಾಗಲಿಲ್ಲ. ಕಾದಂಬಿನಿಯು ಇರುವಾಗ ಹೇಮಾಂಗಿನಿಯು ಕೃಷ್ಣನನ್ನು ಕೆಡಿಸುವುದು ಅಸಾಧ್ಯವಾದ ಮಾತೆಂದು ಅವನು ಭಾವಿಸಿದ. ಆದರೆ ಕಾದಂಬಿನಿಗೆ ತನ್ನಲ್ಲೇ ನಂಬಿಕೆ ಇರ ಲಿಲ್ಲ. ತಾನು ಬಹಳ ಸರಲ ಹೃದಯದವಳೆಂದೂ ಯಾರು ಬೇಕಾದರೂ ತನಗೆ ಮೋಸ ಮಾಡಬಹುದೆಂದೂ ಅದುವೆ ಹೇಮಾಂಗಿನಿಯು ಕೃಷ್ಣನ ಮಾನಸಿಕ ಉನ್ನತಿ-ಅವನತಿಗಳ ಕಡೆಗೆ ತನ್ನ ಪ್ರಖರ ದೃಷ್ಟಿಯನ್ನು ಹಾಕಿದಳೆಂದೂ ಅವಳು ಮನದಲ್ಲೇ ಹೆದರಿದಳು.

ಮರುದಿನವೇ ಇಬ್ಬರು ಆಳುಗಳಲ್ಲಿ ಒಬ್ಬನನ್ನು ತೆಗೆದುಹಾಕಲಾಯಿತು. ಈಗ ನವೀನನ ಅಕ್ಕಿ-ಬೇಳೆಯ ಮಂಡಿಯಲ್ಲಿ ಕೃಷ್ಣನೇ ಕೆಲಸ ಮಾಡತೊಡ ಗಿದ. ಅಕ್ಕಿಬೇಳೆಗಳನ್ನು ಅಳೆಯುವುದು, ಮಾರುವುದು, ಹತ್ತು-ಹದಿನೈದು ಮೈಲುಗಳ ವರೆಗೆ ಸುತ್ತಿ ನಮೂನೆಗಳನ್ನು ತರುವುದು ಮತ್ತು ಮಧ್ಯಾಹ್ನದ

ವೇಳೆ ನವೀನ ಊಟಕ್ಕೆಂದು ಮನೆಗೆ ಹೋದಾಗ ಅಂಗಡಿಯನ್ನು ನೋಡಿ ಕೊಳ್ಳುವುದು ಇವೇ ಮುಂತಾದ ಕೆಲಸಗಳನ್ನು ಮಾಡುತ್ತಿದ್ದ.

ಎರಡು ದಿನಗಳು ಕಳೆದುವು. ಮೂರನೆಯ ದಿನ ಮಧ್ಯಾಹ್ನ ನವೀನನು ಊಟ ನಿದ್ರೆ ಎಲ್ಲವನ್ನೂ ತೀರಿಸಿಕೊಂಡು ಅಂಗಡಿಗೆ ಹೋದಾಗ ಕೃಷ್ಣ ಊಟಕ್ಕಾಗಿ ಮನೆಗೆ ಬಂದ. ಆಗ ಮೂರು ಗಂಟೆಯಾಗಿತ್ತು. ನದಿಗೆ ಹೋಗಿ ಸ್ನಾನ ಮಾಡಿ ಬಂದ. ಒಳಗೆ ಹೋಗಿ ನೋಡಲಾಗಿ ಅಕ್ಕ ಮಲಗಿಗಿದ್ದಳು. ಆ ಸಮಯದ ಅವನ ಹಸಿವೆಯಂತೂ ಹೇಳಲಸಾಧ್ಯವಾಗಿತ್ತು. ಹುಲಿಯ ಬಾಯಿಂದಾದರೂ ಆಹಾರವನ್ನು ಕಿತ್ತು ತಂದು ತಿಂದುಬಿಡಲಿ ಎನ್ನುವಷ್ಟು ಹಸಿವೆಯಾಗಿತ್ತು. ಆದರೆ ಅಕ್ಕನನ್ನು ಎಚ್ಚರಿಸುವ ಸಾಹಸ ಅವನಿಗುಂಟಾಗಲಿಲ್ಲ.

ಅಕ್ಕ ಏಳುವುದನ್ನೇ ಎದುರು ನೋಡುತ್ತ ಅಡಿಗೆಮನೆಯ ಹೊರಗಡೆಯ ಅಂಗಳದಲ್ಲಿ ಸುಮ್ಮನೆ ಕುಳಿತುಕೊಂಡ ಕೃಷ್ಣ. ಅಷ್ಟರಲ್ಲಿ "ಕೃಷ್ಣ!" ಎಂಬ ಸ್ನೇಹ ಜಿರಿತ ಸ್ವರವು ಅಕಸ್ಮಾತ್ ಅವನ ಕಿವಿಗೆ ಬಿತ್ತು. ಆ ಕರೆಯು ಅವನಿಗೆ ಸಂತೋಷವನ್ನುಂಟುಮಾಡಿತು. ತಲೆಯೆತ್ತಿ ನೋಡಲಾಗಿ, ಸಣ್ಣಕ್ಕನು ಎರಡನೆಯ ಮಹಡಿಯ ಕೊಠಡಿಯಲ್ಲಿ ಕಿಟಕಿಯ ಬಳಿ ನಿಂತಿರುವುದು ಅವನಿಗೆ ಕಂಡು ಬಂದಿತು. ಕೇವಲ ಒಂದು ಸಲ ನೋಡಿ, ಕೃಷ್ಣ ತಲೆ ತಗ್ಗಿಸಿಕೊಂಡ. ಸ್ವಲ್ಪ ಹೊತ್ತಿನಲ್ಲಿ ಹೇಮಾಂಗಿನಿಯು ಕೆಳಗಿಳಿದು ಬಂದು ಕೃಷ್ಣನ ಬಳಿ ನಿಂತು "ಏನು ಕೃಷ್ಣ! ಬಹಳ ದಿನಗಳಿಂದ ಕಾಣಿಸುವುದೇ ಇಲ್ಲವಲ್ಲ ? ಇಲ್ಲೇಕೆ ಸುಮ್ಮನೆ ಕುಳಿತಿರುವೆ ?" ಎಂದು ಕೇಳಿದಳು.

ಹಸಿವೆಯಾಗಿದ್ದ ವೇಳೆಯಲ್ಲಿ ಯಾರಾದರೂ ಸ್ವಲ್ಪ ಮಾತನಾಡಿಸಿದರೂ ದುಃಖ ಉಕ್ಕಿ ಬರುವುದು, ಕಣ್ಣುಗಳು ಕಂಬನಿದುಂಬುವುವು. ಹೀಗಿರುವಲ್ಲಿ ಅಂತಹ ಸ್ನೇಹಪೂರ್ಣ ಕಂಠಸ್ವರವೆಂದ ಬಳಿಕ ಕೇಳಬೇಕೇ ? ಅವನ ನೇತ್ರಗಳಿಂದ ಘಳಘಳನೆ ಅಶ್ರುಬಿಂದುಗಳು ಉದುರತೊಡಗಿದುವು. ಅವನು ಸುಮ್ಮನೆ ತಲೆತಗ್ಗಿಸಿ ನಿಂತಿದ್ದ. ಅವನ ಬಾಯಿಂದ ಯಾವ ಮಾತೂ ಹೊರಡಲಿಲ್ಲ.

ಹೇಮಾಂಗಿನಿಯನ್ನು ಕಂಡರೆ ಮಕ್ಕಳೆಲ್ಲರಿಗೂ ಪ್ರಾಣ. ಅವಳ ಧ್ವನಿಯನ್ನು ಕೇಳಿ ಕಾದಂಬಿನಿಯ ಕಡೆಯ ಮಗಳು ಹೊರಗೆ ಓಡಿ ಬಂದಳು.

ಕೃಷ್ಣನನ್ನು ನೋಡಿ ಅವಳು "ಕಿಶನ್ ಮಾಮಾ! ಅಡಿಗೆಯ ಮನೆಯಲ್ಲಿ ನಿನಗಾಗಿ ಅನ್ನ ಮುಚ್ಚಿರಿಸಿದೆ, ಹೋಗಿ ತಿನ್ನು. ಅಮ್ಮ ಈಗ ತಾನೇ ಊಟ ಮಾಡಿ ಮಲಗಿಕೊಂಡಳು." ಎಂದು ಹೇಳಿದಳು.

ಹೇಮಾಂಗಿನಿ ಚಕಿತಳಾಗಿ "ಕೃಷ್ಣ, ಇನ್ನೂ ಊಟ ಮಾಡಿಲ್ಲವೇನೋ? ನಿಮ್ಮ ತಾಯಿ ಊಟಮಾಡಿ ಮಲಗಿರುವಳೆ? ಅದಿರಲಿ, ಕೃಷ್ಣ! ಈ ದಿವಸ ಇಷ್ಟು ಹೊತ್ತೇಕಾಯಿತು?" ಎಂದು ಕೇಳಿದಳು.

ಕೃಷ್ಣ ತಲೆತಗ್ಗಿಸಿಕೊಂಡು ಸುಮ್ಮನೆಯೇ ಕುಳಿತಿದ್ದ. ಅವನ ಪರವಾಗಿ ಜಾನಿಯು (ಕಾದಂಬಿನಿಯ ಕಡೆ ಮಗಳು) "ಮಾಮ ಬರುವುದಕ್ಕೆ ನಿತ್ಯವೂ ಇಷ್ಟೇ ಹೊತ್ತಾಗುವುದು. ತಂದೆಯವರು ಊಟ ಮಾಡಿ ಮಲಗಿ, ಎದ್ದು ಅಂಗಡಿಗೆ ಹೋದನಂತರ ಮಾವ ಮನೆಗೆ ಬರುವನು." ಎಂದು ಹೇಳಿದಳು.

ಕೃಷ್ಣನನ್ನು ಅಂಗಡಿಯ ಕೆಲಸಕ್ಕೆ ಹಾಕಿರುವರೆಂದು ಹೇಮಾಂಗಿನಿಗೆ ಈಗ ತಿಳಿಯಿತು. ಅವನಿಂದ ಏನಾದರೂ ಕೆಲಸ ತೆಗೆಸಿಕೊಳ್ಳದೆ, ಅವನಿಗೆ ಬಿಟ್ಟಿ ಊಟ ಹಾಕುವದಿಲ್ಲವೆಂಬುದನ್ನು ಹೇಮಾಂಗಿನಿಯು ಚೆನ್ನಾಗಿ ಅರಿತಿದ್ದಳು. ಆದರೂ ಈ ಮೀರಿ ಹೋದ ವೇಳೆಯನ್ನು ಕಂಡು ಅವಳಿಗೆ ಬಹಳ ದುಃಖವಾಯಿತು. ಹಸಿವು ಬಾಯಾರಿಕೆಗಳಿಂದ ಕಂಗೆಟ್ಟ ಆ ಮುಖವನ್ನು ನೋಡಿ ಅವಳ ನೇತ್ರಗಳು ಅಶ್ರುಪೂರಿತವಾದುವು. ಸೀರೆಯ ಸೆರಗಿನಿಂದ ಕಣ್ಣೀರನ್ನೊರೆಸಿಕೊಳ್ಳುತ್ತ ಅವಳು ತನ್ನ ಮನೆಗೆ ಹೊರಟು ಹೋದಳು. ಪುನಃ ಒಂದೆರಡು ನಿಮಿಷಗಳಲ್ಲೇ ಒಂದು ಲೋಟದ ತುಂಬ ಹಾಲನ್ನು ತೆಗೆದುಕೊಂಡು ಹಿಂತಿರುಗಿದಳು. ಆದರೆ ಅಡಿಗೆಯ ಮನೆಯನ್ನು ಪ್ರವೇಶಿಸಿದೊಡನೆಯೇ ಅವಳ ಮೈ ಜುಮ್ಮೆಂದಿತು. ಮುಖವನ್ನು ಬೇರೆ ಕಡೆಗೆ ತಿರುಗಿಸಿ ಸುಮ್ಮನೆ ನಿಂತುಬಿಟ್ಟಳು.

ಕೃಷ್ಣ ಊಟ ಮಾಡಲು ಕುಳಿತಿದ್ದ. ಹಿತ್ತಾಳೆಯ ಒಂದು ತಟ್ಟೆಯಲ್ಲಿ ಆರಿ—ತಣ್ಣಗಾಗಿ ಹೋಗಿದ್ದ ಅನ್ನವಿತ್ತು. ಒಂದು ಕಡೆಯಲ್ಲಿ ಸ್ವಲ್ಪ ಹುಳಿ, ಇನ್ನೊಂದು ಕಡೆಯಲ್ಲಿ ಸ್ವಲ್ಪ ತರಕಾರಿ. ಹಾಲನ್ನು ಕಂಡು ಅವನ ಮುಖದ ಮೇಲೆ ನಗೆ ಮೂಡಿತು.

ಹೇಮಾಂಗಿನಿಯು ಹೊರಗಡೆ ಬಂದು ನಿಂತಿದ್ದಳು. ಊಟ ಮಾಡಿ ಎದ್ದು, ಕೃಷ್ಣ ಕೈತೊಳೆಯಲು ಹೊರಗೆ ಹೋದಾಗ ಅವಳು ಒಳಗಡೆ ಇಣಿಕಿ

ನೋಡಿದಳು. ತಟ್ಟೆಯಲ್ಲಿ ಒಂದು ಅಗುಳು ಅನ್ನ ಸಹ ಉಳಿದಿರಲಿಲ್ಲ. ಅಪಾರವಾದ ಹಸಿವೆಯಾಗಿದ್ದರಿಂದ ಕೃಷ್ಣ ಎಲ್ಲ ಅನ್ನವನ್ನೂ ಉಂಡು ಬಿಟ್ಟಿದ್ದ.

ಹೇಮಾಂಗಿನಿಯ ಮಗ ಲಲಿತನೂ ಸುಮಾರು ಇದೇ ವಯಸ್ಸಿನವನು. ತಾನಿಲ್ಲದಿದ್ದರೆ ಅವನ ಗತಿಯು ಹೀಗೇ ಆಗಬಹುದಲ್ಲವೇ ? ಎಂಬ ಯೋಚನೆ ಅವಳ ಮನದಲ್ಲಿ ಉದಯವಾಯಿತು. ಈ ಕಲ್ಪನೆಯಿಂದ ಅವಳಿಗೆ ತಡೆಯ ಲಾಗದ ದುಃಖ ಉಕ್ಕಿ ಬಂದಿತು. ಆದರೂ ಅದನ್ನು ತಡೆದುಕೊಂಡು ಅವಳು ಮನೆಗೆ ಹೋದಳು.

೪

ಹೇಮಾಂಗಿನಿಗೆ ಆಗಾಗ್ಗೆ ನೆಗಡಿಯಾಗುತ್ತಿತ್ತು. ಅಲ್ಲದೆ ಜ್ವರವೂ ಬರುತ್ತಿದ್ದುವು. ಒಂದೆರಡು ದಿನಗಳ ನಂತರ ತನ್ನಷ್ಟಕ್ಕೆ ತಾನೇ ವಾಸಿಯಾ ಗುತ್ತಿತ್ತು. ಕೆಲವು ದಿನಗಳ ನಂತರ ಅವಳಿಗೆ ಇದೇ ರೀತಿ ಜ್ವರ ಬಂದಿತು. ಸುಮಾರು ಸಂಜೆಯ ಹೊತ್ತಿನಲ್ಲಿ ಅವಳು ತನ್ನ ಹಾಸಿಗೆಯ ಮೇಲೆ ಮಲಗಿ ದ್ದಳು. ಮನೆಯಲ್ಲಿ ಯಾರೂ ಇರಲಿಲ್ಲ. ಅಕಸ್ಮಾತ್ ಅವಳಿಗೆ ಬಾಗಿಲ ಸಂದಿನಿಂದ ಯಾರೋ ಇಣಿಕಿ ನೋಡುತ್ತಿರುವಂತೆ ಕಂಡು ಬಂದಿತು. ಅವಳು "ಯಾರದು ಹೊರಗಡೆ ನಿಂತಿರುವುದು ? ಲಲಿತ !" ಎಂದು ಕೂಗಿದಳು.

ಯಾರೂ ಉತ್ತರ ಕೊಡಲಿಲ್ಲ. ಅವಳು ಪುನಃ ಅದೇ ರೀತಿ ಕೇಳಲಾಗಿ 'ನಾನು' ಎಂಬ ಉತ್ತರ ಬಂದಿತು.

ಕೃಷ್ಣ ಬಹಳ ಸಂಕೋಚದಿಂದ ಕೊಠಡಿಯನ್ನು ಪ್ರವೇಶಿಸಿ, ಗೋಡೆಗೆ ಒರಗಿ ನಿಂತುಕೊಂಡ. ಹೇಮಾಂಗಿನಿಯು ಎದ್ದು ಕುಳಿತಳು. ಕೃಷ್ಣನನ್ನು ಬಳಿಗೆ ಕರೆದು ಸ್ನೇಹದಿಂದ "ಏನು ಕೃಷ್ಣ !" ಎಂದು ಕೇಳಿದಳು.

ಕೃಷ್ಣನು ಮುಂದೆ ಬಂದು ನಿಂತು, ತನ್ನ ದುಪ್ಪಟಿಯ ಒಂದು ಕೊನೆ ಯಿಂದ ಎರಡು ಸೀಬೆಯ ಕಾಯಿ*ಗಳನ್ನು ತೆಗೆದು ಹೇಮಾಂಗಿನಿಯ ಕೈಗೆ ಕೊಟ್ಟು "ಜ್ವರಕ್ಕೆ ಇದು ಬಹಳ ಒಳ್ಳೆಯದು !" ಎಂದ.

---

* ಬಂಗಾಲ ದೇಶದವರು ಶೀತ ಮತ್ತು ಜ್ವರಗಳಲ್ಲಿ ಸೀಬೆಯ ಕಾಯನ್ನು ತಿನ್ನುವರು.

ಹೇಮಾಂಗಿನಿಯು ಆತುರದಿಂದ ಅವನ್ನು ತೆಗೆದುಕೊಳ್ಳುತ್ತ "ಕೃಷ್ಣ ! ಇದು ನಿನಗೆಲ್ಲಿ ಸಿಕ್ಕಿತು ? ನಿನ್ನೆಯಿಂದ ನಾನು ಇವಕ್ಕಾಗಿ ಎಷ್ಟು ಜನರಿಗೆ ಹೇಳಿದೆ. ಯಾರೂ ತಂದು ಕೊಡಲಿಲ್ಲ!" ಎಂದು ಹೇಳಿ, ಸಂಗಡಲೇ ಅವನ ಕೈಹಿಡಿದುಕೊಂಡು ಅವನನ್ನು ತನ್ನ ಬಳಿ ಕುಳ್ಳಿರಿಸಿಕೊಂಡಳು. ಆನಂದ ಮತ್ತು ಲಜ್ಜೆಗಳಿಂದ ಅವನ ಮುಖ ಕೆಂಪಾಯಿತು. ಅವನು ತಲೆ ತಗ್ಗಿಸಿಕೊಂಡ. ಆಗ ಸೀಬೆಯಕಾಯಿಯ ಕಾಲವಾಗಿರಲಿಲ್ಲ. ಅದೂ ಅಲ್ಲದೆ ಹೇಮಾಂಗಿನಿಯು ಸೀಬೆಯಕಾಯಿ ಬೇಕೆಂದು ಕೇಳಿರಲೂ ಇಲ್ಲ. ಇಷ್ಟಾದರೂ ಆ ಎರಡು ಸೀಬೆಯ ಕಾಯಿಗಾಗಿ ಕೃಷ್ಣ ಅಂತಹ ಉರಿಬಿಸಿಲಿನಲ್ಲಿ ಬಹಳ ಕಡೆಗೆ ಅಲೆದಾಡಿ ಅವನ್ನು ತಂದಿದ್ದ.

"ಕೃಷ್ಣ ! ನನಗೆ ಜ್ವರ ಬಂದಿದೆಯೆಂದು ನಿನಗೆ ಯಾರು ಹೇಳಿದರು ?" ಎಂದು ಕೇಳಿದಳು ಹೇಮಾಂಗಿನಿ.

ಕೃಷ್ಣ ಏನೂ ಉತ್ತರ ಕೊಡಲಿಲ್ಲ.

"ನಾನು ಸೀಬೆಯ ಕಾಯಿ ತಿನ್ನಲು ಬಯಸಿದೆನೆಂದು ನಿನಗೆ ಯಾರು ಹೇಳಿದರು ?" ಎಂದು ಪುನಃ ಕೇಳಿದಳು ಹೇಮಾಂಗಿನಿ.

ಕೃಷ್ಣ ಅದಕ್ಕೂ ಉತ್ತರ ಕೊಡದೆ ಸುಮ್ಮನಿದ್ದ. ಬಗ್ಗಿಸಿದ್ದ ತಲೆಯನ್ನು ಮೇಲಕ್ಕೆ ಎತ್ತಲೇ ಇಲ್ಲ. ಹುಡುಗನು ಲಜ್ಜಾಶೀಲನು ಮತ್ತು ಭೀರುವೆಂದು ಅವಳು ಮೊದಲೇ ತಿಳಿದುಕೊಂಡಿದ್ದಳು. ಅವನನ್ನು ಹತ್ತಿರ ಕರೆದು, ಅವನ ತಲೆಯನ್ನು ಪ್ರೀತಿಯಿಂದ ಸವರುತ್ತ, ಪ್ರೇಮಪೂರ್ವಕವಾಗಿ ಸಂಬೋಧಿಸಿ ಮಾತನಾಡಿಸಿದಳು. ಮತ್ತು ಅತಿ ಕುಶಲತೆಯಿಂದ ಅವನ ಭಯವನ್ನು ದೂರ ಮಾಡಿ ಅವನಿಂದ ಅನೇಕ ವಿಷಯಗಳನ್ನು ತಿಳಿದುಕೊಂಡಳು. ಮೊದಲು ಅವಳು "ನಿನಗೆ ಈ ಸೀಬೆಯ ಕಾಯಿ ಎಲ್ಲಿಂದ ಸಿಕ್ಕಿತು ?" ಎಂದು ಕೇಳಿದಳು. ನಂತರ ಅವನ ಊರು–ಕೇರಿಯ ವಿಚಾರ, ಅವನ ತಾಯಿಯ ಸಮಾಚಾರ, ಇಲ್ಲಿಯ ಊಟ–ಉಡಿಗೆಗಳ ವ್ಯವಸ್ಥೆ, ಅಂಗಡಿಯಲ್ಲಿ ಯಾವ ಯಾವ ಕೆಲಸ ಮಾಡಬೇಕಾಗುವುದು ಎನ್ನುವ ವಿಚಾರವೇ ಆದಿಯಾಗಿ ಎಲ್ಲವನ್ನೂ ಒಂದೊಂದಾಗಿ ಕೇಳಿ ತಿಳಿದುಕೊಂಡಳು. ನಂತರ ಅವನ ಕಣ್ಣುಗಳನ್ನೊರೆಸುತ್ತ "ಇದೋ ನೋಡು ಕೃಷ್ಣ ! ನಿನ್ನ ಈ ಚಿಕ್ಕಕ್ಕನೊಡನೆ ಯಾವ ಮಾತನ್ನೂ ಮರೆಮಾಚಬೇಡ. ಯಾವ ವೇಳೆಯಲ್ಲಿ ಏನು ಬೇಕಾದರೂ ಬಂದು ಕೇಳಿ ತೆಗೆದುಕೋ ! ತೆಗೆದುಕೊಳ್ಳುವೆಯಾ ?" ಎಂದು ಕೇಳಿದಳು.

ಅತಿ ಪ್ರಸನ್ನತೆಯಿಂದ ಕೃಷ್ಣ ತಲೆಯಲ್ಲಾಡಿಸಿ "ಒಳ್ಳೆಯದು" ಎಂದಳು.

ವಾಸ್ತವಿಕ ಸ್ನೇಹವಾವುದೆಂಬುದನ್ನು ಕೃಷ್ಣ ತನ್ನ ಬಡ ಮಾತೆಯಿಂದ ತಿಳಿದುಕೊಂಡಿದ್ದ. ಈ ದಿನ ತನ್ನ ಚಿಕ್ಕಕ್ಕನಲ್ಲಿ ಅದೇ ಸ್ನೇಹವನ್ನು ಕಂಡು ಕೃಷ್ಣನ ಮಾತೃ ಶೋಕವು ಹರಿಯತೊಡಗಿತು. ಎದ್ದು ಹೋಗುವ ಸಮಯದಲ್ಲಿ ಅವನು ತನ್ನ ಚಿಕ್ಕಕ್ಕನ ಪಾದ ಧೂಳಿಯನ್ನು ತನ್ನ ತಲೆಯ ಮೇಲಿರಿಸಿಕೊಂಡು, ಮಾತನಾಡದೆ ಸುಮ್ಮನೆ ಅಲ್ಲಿಂದ ಹೊರಟು ಹೋದ.

ಆದರೆ ಅವನ ಬಗ್ಗೆ ಅವನ ದೊಡ್ಡಕ್ಕನ ಆಕ್ರೋಶವು ದಿನೇ ದಿನೇ ಹೆಚ್ಚುತ್ತಲೇ ಹೋಯಿತು. ಎಷ್ಟೆಂದರೂ ಅವನು ಮಲತಮ್ಮ. ಅವನನ್ನು ಮನೆ ಬಿಟ್ಟು ಓಡಿಸಿದರೆ ತನಗೆ ಕೆಟ್ಟ ಹೆಸರು ಬರುವುದೆಂಬ ಹೆದರಿಕೆಯಿಂದ ಅವನು ಏನೇ ಮಾಡಲಿ, ಅವನನ್ನು ಮನೆಯಿಂದ ಹೊರದೂಡುವಂತಿರಲಿಲ್ಲ. ಆದ್ದರಿಂದ ಅವನು ಇರುವ ವರೆಗೂ ಅವನಿಂದ ಚೆನ್ನಾಗಿ ಕೆಲಸ ತೆಗೆದುಕೊಳ್ಳಬೇಕು ಎಂಬುದೇ ಅವಳ ಮನೋಭಿಪ್ರಾಯವಾಗಿದ್ದಿತು.

ಮನೆಗೆ ಬರುತ್ತಲೇ ದೊಡ್ಡಕ್ಕನು ಅವನನ್ನು "ಮಧ್ಯಾಹ್ನವೆಲ್ಲಾ ಅಂಗಡಿ ಬಿಟ್ಟು ಎಲ್ಲಿ ಓಡಿಹೋಗಿದ್ದೆಯೋ?" ಎಂದು ಗದರಿಸಿದಳು.

ಕೃಷ್ಣ ಸುಮ್ಮನಿದ್ದ. ಕಾದಂಬಿನಿಗೆ ಬಹಳ ಕೋಪ ಬಂದಿತು.

"ಬೇಗನೆ ಹೇಳೋ, ಕತ್ತೆ!" ಎಂದು ಗದರಿದಳು ಪುನಃ. ಅಷ್ಟಾದರೂ ಕೃಷ್ಣ ಉತ್ತರ ಕೊಡಲಿಲ್ಲ. ಇತರರು ಮಾತನಾಡದೆ ಮೌನದಿಂದಿರುವುದರಿಂದ ದೂರವಾಗುವ ಕೋಪವಲ್ಲ ಕಾದಂಬಿನಿಯದು! ಆದ್ದರಿಂದ ಅವಳು ಹೆಚ್ಚು ಹೆಚ್ಚು ಮಾತನಾಡಿಸಿದಷ್ಟೂ ಅವನು ಮಾತನಾಡದೆ ಮೌನದಿಂದ ಇದ್ದುದನ್ನು ಕಂಡು ಅವಳ ಕೋಪವು ಹೆಚ್ಚುತ್ತ ಬಂದಿತು. ಕಡೆಗೆ ಪಾಚು-ಗೋಪಾಲರನ್ನು ಕರೆದು ಅವರ ಕೈಯಿಂದ ಅವನ ಕಿವಿ ಹಿಂಡಿಸಿದಳು. ಅಲ್ಲದೆ ಅವನಿಗೆ ರಾತ್ರಿ ಊಟಕ್ಕೆ ಹಾಕದೆ ಉಪವಾಸವಿರುವಂತೆ ಮಾಡಿದಳು.

ಎಂತಹ ಭಾರಿಯ ಆಘಾತವೇ ಆಗಲಿ, ಅದು ಪ್ರತಿಹತವಾಗದಿದ್ದರೆ ಅದರ ಏಟೇ ತಗಲುವದಿಲ್ಲ. ಪರ್ವತದ ಶಿಖರದಿಂದ ಬಿದ್ದ ಮಾತ್ರಕ್ಕೆ ಮನುಷ್ಯನ ಕೈಕಾಲುಗಳು ಮುರಿದುಹೋಗುವುದಿಲ್ಲ. ಅವನ ಕಾಲ ಕೆಳಗಣ

ಭೂಮಿಯು ಆ ವೇಗವನ್ನು ಪ್ರತಿರೋಧಿಸಿದಾಗ ಮಾತ್ರ ಅವನ ಕೈಕಾಲುಗಳು ಮುರಿಯುವುವು. ಕೃಷ್ಣನ ವಿಚಾರದಲ್ಲೂ ಹೀಗೇ ಆಯಿತು. ಮಾತೆಯ ಮೃತ್ಯುವಿನಿಂದ ನಿರಾಧಾರನಾದ ಬಳಿಕಂತೂ ಅವನಿಗೆ ಯಾವ ಅಪಘಾತವೂ ತಗಲುತ್ತಲೇ ಇರಲಿಲ್ಲ. ಅವನು ಬಡತನದಲ್ಲಿ ಹುಟ್ಟಿ ಬೆಳೆದವನಾದರೂ ಇದು ವರೆಗೆ ಯಾವ ಧುಃಖವನ್ನೂ ಅನುಭವಿಸಿದವನಲ್ಲ. ಕೋಪ, ಸಿಡುಕು, ಗದರಿಕೆ ಗಳ ಪರಿಚಯವೇ ಅವನಿಗಾಗಿರಲಿಲ್ಲ. ಆದರೂ ಇಲ್ಲಿಗೆ ಬಂದ ಬಳಿಕ ಇದು ವರೆಗೆ ಇಷ್ಟೊಂದು ಕಠೋರ ದುಃಖಗಳನ್ನು ಅನಾಯಾಸವಾಗಿ ಸಹಿಸಿದುದರ ಮುಖ್ಯ ಕಾರಣವೆಂದರೆ ಅವನಿಗೆ ಮತ್ತಾವ ಅವಲಂಬನವೂ ಇಲ್ಲದುದೇ! ಆದರೆ ಈ ದಿವಸ ಆವನಿಗೆ ಸಹಿಸಲಾಗಲಿಲ್ಲ. ಇಂದು ಅವನು ಹೇಮಾಂಗಿ ನಿಯ ಮಾತೃಸ್ನೇಹದ ದೃಢ ಭಿತ್ತಿಯ ಮೇಲೆ ನಿಂತಿದ್ದ. ಆದಕಾರಣ ಈ ಅಪಮಾನ–ಅತ್ಯಾಚಾರಗಳು ಈ ದಿವಸ ಅವನನ್ನು ಧರಾಶಾಯಿಯನ್ನಾಗಿಸಿ ದುವು. ಮಾತಾ ಪುತ್ರರಿಬ್ಬರೂ ಈ ನಿರಪರಾಧ–ನಿರಾಶ್ರಯ ಬಾಲಕನನ್ನು ಗದರಿಸಿ, ಬೈದು, ಅಪಮಾನಗೊಳಿಸಿ, ದಂಡಿಸಿ ಅಲ್ಲಿಂದ ಹೊರಟುಹೋದರು. ಅವನು ಆ ಅಂಧಕಾರದಲ್ಲಿ ನೆಲದ ಮೇಲೆ ಹೊರಳಾಡುತ್ತ ಅನೇಕ ದಿನಗಳ ನಂತರ ತನ್ನ ಮೃತ ಮಾತೆಯನ್ನೂ ಚಿಕ್ಕಪ್ಪನನ್ನೂ ನೆನೆಸಿಕೊಳ್ಳುತ್ತ ಬಿಕ್ಕಿ ಬಿಕ್ಕಿ ಅಳತೊಡಗಿದ.

೫

ಮರುದಿನ ಮುಂಜಾನೆಯೇ ಕೃಷ್ಣ ಹೇಮಾಂಗಿನಿಯ ಮನೆಗೆ ಹೋಗಿ, ಅವಳ ಹಾಸಿಗೆಯ ಮೇಲೆ ಕಾಲ ಬಳಿಯಲ್ಲಿ ಬಂದು ಕುಳಿತುಕೊಂಡ. ಹೇಮಾಂಗಿನಿಯು ತನ್ನ ಕಾಲನ್ನು ಸ್ವಲ್ಪ ಸರಿಸಿಕೊಂಡು ಸ್ನೇಹಪೂರ್ವಕ ವಾಗಿ "ಕೃಷ್ಣ! ಅಂಗಡಿಗೆ ಹೋಗುವುದಿಲ್ಲವೇ?" ಎಂದು ಕೇಳಿದಳು.

"ಈಗ ಹೋಗುವೆನು."

"ವಿಳಂಬ ಮಾಡಬೇಡ ಕೃಷ್ಣ! ಈಗಲೇ ಹೊರಟು ಹೋಗು. ಇಲ್ಲ ದಿದ್ದರೆ ಬೈಗಳನ್ನು ಕೇಳಬೇಕಾಗುವದು."

ಕೃಷ್ಣನ ಮುಖ ಒಮ್ಮೆಗೇ ಕೆಂಪೇರಿ ಪುನಃ ಪಚ್ಚಾಯಿತು “ ಹಾಗೆಯೇ ಆಗಲಿ, ಹೋಗುವೆನು ” ಎಂದು ಅವನು ಎದ್ದು ನಿಂತ. ಒಂದು ಸಲ ಹಿಂದು ಮುಂದು ನೋಡಿ ಏನನ್ನೋ ಹೇಳಬೇಕೆಂದು ಯೋಚಿಸಿದ; ಆದರೆ ಸುಮ್ಮ ನಾಗಿಹೋದ. ಹೇಮಾಂಗಿನಿಯು ಅವನು ಏನನ್ನೋ ಹೇಳಬಯಸುವನೆಂದು ಅರಿತುಕೊಂಡಳು. “ಏನಾದರೂ ಹೇಳಬೇಕಾಗಿದೆಯೇ ಕೃಷ್ಣ ? ” ಎಂದು ಕೇಳಿದಳು.

ಕೃಷ್ಣ ನೆಲವನ್ನೇ ದಿಟ್ಟಿಸುತ್ತ ಅತಿ ಕೋಮಲ ಸ್ವರದಿಂದ “ ಚಿಕ್ಕಕ್ಕ ! ನಿನ್ನೆಯ ದಿವಸ ಏನೂ ತಿನ್ನಲಿಲ್ಲ. ” ಎಂದು ಹೇಳಿದ.

“ ಆಂ ! ನಿನ್ನೆಯಿಂದ ಏನೂ ತಿನ್ನಲಿಲ್ಲವೇ ? ಏನು ಹೇಳುವಿ ಕೃಷ್ಣ ! ”

ಹೇಮಾಂಗಿನಿಯು ಸ್ವಲ್ಪ ಹೊತ್ತು ಸ್ತಬ್ಧಳಾಗಿ ನಿಂತುಬಿಟ್ಟಳು. ಒಡ ನೆಯೇ ಅವಳ ನೇತ್ರಗಳು ಅಶ್ರುಪೂರಿತವಾದುವು; ಆ ಬಳಿಕ ಟಪ ಟಪನೆ ಅಶ್ರುಬಿಂದುಗಳು ಉದುರತೊಡಗಿದುವು. ಅವನನ್ನು ಕೈಹಿಡಿದೆಳೆದು ಸಮೀಪ ದಲ್ಲಿ ಕುಳ್ಳಿರಿಸಿಕೊಂಡು, ಅವನಿಂದ ಒಂದೊಂದಾಗಿ ಎಲ್ಲ ವಿಷಯಗಳನ್ನೂ ತಿಳಿದುಕೊಂಡಳು. ನಂತರ “ ನಿನ್ನೆ ರಾತ್ರಿಯೇ ಇಲ್ಲಿಗೆ ಏಕೆ ಬಂದು ಬಿಡ ಲಿಲ್ಲ ? ” ಎಂದು ಕೇಳಿದಳು.

ಕೃಷ್ಣ ಸುಮ್ಮನಿದ್ದ. ಹೇಮಾಂಗಿನಿಯು ಸೀರೆಯ ಸೆರಗಿನಿಂದ ಕಣ್ಣೀ ರನ್ನು ಒರೆಸಿಕೊಳ್ಳುತ್ತ “ ಕೃಷ್ಣ ! ಈ ದಿವಸದಿಂದ ನನ್ನಾಣೆ ! ಇಂದಿನಿಂದ ನಾನು ನಿನ್ನ ತಾಯಿಯೆಂದು ತಿಳಿ ” ಎಂದು ಹೇಳಿದಳು.

ಹಾಗೂ ಹೀಗೂ ಈ ಮಾತುಗಳೆಲ್ಲ ಕಾದಂಬಿನಿಯ ಕಿವಿಗೆ ಬಿದ್ದುವು. ಅವಳು ತನ್ನ ಮನೆಯಿಂದಲೇ ಹೇಮಾಂಗಿನಿಯನ್ನು ಕೂಗಿ “ ಏನು ? ನಾನು ನನ್ನ ತಮ್ಮನಿಗೆ ಊಟ-ತಿಂಡಿಗಳನ್ನು ಕೊಟ್ಟು ಕಾಪಾಡಲಾರೆನೇ ? ಅವನನ್ನು ಇಷ್ಟೊಂದು ಉಬ್ಬಿಸಿ, ಇಷ್ಟೆಲ್ಲ ಮಾತುಗಳನ್ನು ಹೇಳಿಕೊಡುತ್ತಿರುವೆಯೇಕೆ ?” ಎಂದು ಕೇಳಿದಳು ಕೋಪದಿಂದ.

ಮಾತಿನ ರೀತಿಯನ್ನು ಕಂಡು ಹೇಮಾಂಗಿನಿಯ ಶರೀರವೆಲ್ಲಾ ಬೆಂಕಿಯ ಚೂರಾಯಿತು. ಆದರೂ ಅವಳು ಆ ಕೋಪವನ್ನಡಗಿಸಿಕೊಂಡು “ ಅವನಿಗೆ

ಒಂದೆರಡು ಮಾತನ್ನು ಹೇಳಿದರೆ ಅವರಲ್ಲಿ ತಪ್ಪಾದರೂ ಏನು?" ಎಂದು ಕೇಳಿದಳು.

"ನಾನು ನಿನ್ನ ಮಗನನ್ನು ಕರೆದು ಅವನೊಡನೆ ಇದೇ ರೀತಿಯ ಮಾತುಗಳನ್ನಾಡಿದರೆ ಆಗ ನಿನ್ನ ಮರ್ಯಾದೆ ಎಷ್ಟು ಉಳಿಯುವುದು ನೀನೇ ಹೇಳು! ಅವನನ್ನು ನೀನು ಈ ರೀತಿ ಹೆಚ್ಚಿಸಿದರೆ, ನಾನು ಭಯದಲ್ಲಿ ಇರಿಸುವುದಾದರೂ ಹೇಗೆ?" ಎಂದಳು ಕಾದಂಬಿನಿ.

ಇನ್ನು ಹೇಮಾಂಗಿನಿಗೆ ಸಹಿಸಲಾಗಲಿಲ್ಲ. ಅವಳು "ಅಕ್ಕ! ಹದಿನೈದು-ಹದಿನಾರು ವರ್ಷ ನಿಮ್ಮ ಸಂಗಡ ನಾನೂ ಸಂಸಾರ ನಡೆಸಿರುವೆ. ನಿಮ್ಮ ಗುಣ ನನಗೆ ಚೆನ್ನಾಗಿ ಗೊತ್ತು. ಮೊದಲು ನಿಮ್ಮ ಮಗನನ್ನು ಉಪವಾಸ ಇರಿಸಿ ದಂಡಿಸಿರಿ. ನಂತರ ಇತರರ ಮಕ್ಕಳನ್ನು ದಂಡಿಸುವಿರಂತೆ! ಆಗ ನಾನು ಯಾವ ಮಾತನ್ನೂ ಹೇಳಲು ಬರುವುದಿಲ್ಲ." ಎಂದಳು.

ಕಾದಂಬಿನಿಯು ಚಕಿತಳಾಗಿ "ನನ್ನ ಪಾಚು ಗೋಪಾಲರೊಡನೆ ಅವನ ಹೋಲಿಕೆಯೇ? ದೇವತೆಗೂ ಕಪಿಗೂ ಎಲ್ಲಿಯ ಸಮಾನತೆ! ಹೇಮಾಂಗಿನೀ, ಹೀಗೆಯೇ ಇನ್ನೂ ಎಂತೆಂತಹ ಮಾತುಗಳನ್ನಾಡುವೆಯೋ ಯಾರು ಬಲ್ಲರು?" ಎಂದು ಹೇಳಿದಳು.

"ದೇವತೆ ಯಾರು? ಕಪಿ ಯಾರು? ಎಂಬುದು ನನಗೆ ಗೊತ್ತು ಅಕ್ಕ! ಇನ್ನು ನಾನೇನೂ ಹೇಳುವುದಿಲ್ಲ. ಆದರೆ ನಿಮ್ಮಂತಹ ನಿಷ್ಠುರ, ನಿರ್ಲಜ್ಜ ಹೆಂಗಸು ಈ ಪ್ರಪಂಚದಲ್ಲಿ ಮತ್ತಾರೂ ಇಲ್ಲವೆಂದು ಮಾತ್ರ ಹೇಳದೆ ಇರಲಾರೆ!" ಎಂದಳು ಹೇಮಾಂಗಿನಿ.

ಆ ಬಳಿಕ ಒಂದು ಕ್ಷಣವೂ ಅಲ್ಲಿ ನಿಲ್ಲದೆ, ಉತ್ತರವನ್ನೂ ನಿರೀಕ್ಷಿಸದೆ, ಕಿಟಿಕಿಯನ್ನು ಮುಚ್ಚಿ ಒಳಕ್ಕೆ ಹೊರಟು ಹೋದಳು.

ಆ ದಿನ ಸಾಯಂಕಾಲಕ್ಕೆ ಸ್ವಲ್ಪ ಮುಂಚಿತವಾಗಿ ಅಂದರೆ ಮನೆಯ ಯಜಮಾನರು ಮನೆಗೆ ಹಿಂತಿರುಗುವುದಕ್ಕೆ ಸ್ವಲ್ಪ ಮುಂಚಿತವಾಗಿ ಕಾದಂಬಿನಿಯು ಮನೆಯ ಅಂಗಳದಲ್ಲಿ ನಿಂತು ದಾಸಿಯೊಡನೆ ಜೋರಾಗಿ "ದಿನಾಲು ಮಾಡುವವರು ಎಲ್ಲಾದರೂ ಹೋಗಲಿ! ಪಾಪ, ಅವರಿಗಿಂತ ಇವಳಿಗೆ ಶ್ರದ್ಧೆ ಜಾಸ್ತಿ! ನನ್ನ ತಮ್ಮನ ಮರ್ಮವನ್ನು ನಾನರಿಯದೆ ಇತರರು ಅರಿಯುವ

ರಲ್ಲವೇ? ಅಕ್ಕ–ತಮ್ಮಂದಿರಲ್ಲಿ ಈ ರೀತಿ ದ್ವೇಷವನ್ನು ತಂದಿರಿಸಿ ತಮಾಷೆ ನೋಡುವವರಿಗೆ ಎಂದೂ ಒಳ್ಳೆಯದಾಗುವುದಿಲ್ಲ. ಧರ್ಮವೂ ಇದನ್ನು ಸಹಿಸುವುದಿಲ್ಲ!" ಎಂದು ಕೂಗಾಡಿ ಅವಳು ಅಡಿಗೆಯ ಮನೆಗೆ ಹೊರಟು ಹೋದಳು.

ಓರಗಿತ್ತಿಯರಲ್ಲಿ ಈ ಪರಿಯ ಜಗಳ-ಕದನಗಳು, ಮಾತು-ಕತೆಗಳು ಅನೇಕ ಸಲ ನಡೆದಿರುವವು. ಆದರೆ ಈ ದಿವಸದ ಮಾತಿನ ರೀತಿಯಲ್ಲಿ ಸ್ವಲ್ಪ ಕಠೋರತೆ ಹೆಚ್ಚಾಗಿತ್ತು. ಅನೇಕ ಸಲ ಹೇಮಾಂಗಿನಿಯು ಅವಳ ಮಾತನ್ನು ಕೇಳಿದರೂ ಕೇಳದವಳಂತೆ ತಿಳಿದರೂ ತಿಳಿಯದವಳಂತೆ ಸುಮ್ಮನಿರುತ್ತಿದ್ದಳು. ಈ ದಿವಸ ಅವಳಿಗೆ ಮೈಯಲ್ಲಿ ಚೆನ್ನಾಗಿರಲಿಲ್ಲ. ಅವಳು ಎದ್ದು ಬಂದು ಕಿಟಕಿಯ ಬಳಿ ನಿಂತು "ಅಕ್ಕ! ಇಷ್ಟೇ ಹೇಳಿ ಏಕೆ ಸುಮ್ಮನಾದಿರಿ? ಆ ಭಗವಂತನಿಗೆ ನಿಮ್ಮ ಈ ಮಾತುಗಳು ಇನ್ನೂ ಕೇಳಬಂದಿರಲಾರವು. ಇನ್ನೂ ಸ್ವಲ್ಪ ಹೊತ್ತು ನಮ್ಮ ಸರ್ವನಾಶವಾಗಲೆಂದು ಪ್ರಾರ್ಥನೆ ಮಾಡಿರಿ. ಆ ಹೊತ್ತಿಗೆ ಸರಿಯಾಗಿ ಭಾವನವರು ಮನೆಗೆ ಬರಲಿ, ಈ ಮಾತುಗಳೆಲ್ಲವನ್ನೂ ಕೇಳಲಿ. ಇವರೂ ಬಂದು ಎಲ್ಲವನ್ನೂ ಕೇಳಲಿ. ಇಷ್ಟಕ್ಕೇ ಮಾತನ್ನು ನಿಲ್ಲಿಸಿಬಿಟ್ಟರೆ ಕೆಲಸ ಹೇಗೆ ನಡೆಯುವುದು?" ಎಂದಳು.

ಕಾದಂಬಿನಿಯು ಒಡನೆಯೇ ಅಂಗಳಕ್ಕೆ ಓಡಿ ಬಂದಳು. ತಲೆಯೆತ್ತಿ ನೋಡಿ, ಹೇಮಾಂಗಿನಿಯನ್ನು ಕುರಿತು "ನಾನು ಸರ್ವನಾಶದ ಮಾತನ್ನಾದರೂ ಎತ್ತಿದೆನೇ?" ಎಂದು ಕೇಳಿದಳು.

"ಪಾಪ! ನೀವು ಅಂತಹ ಮಾತುಗಳನ್ನಾಡುವಿರೇನು? ಅಕ್ಕ! ಪ್ರಪಂಚದಲ್ಲಿ ನಿಮಗೊಬ್ಬರಿಗೇ ಬುದ್ಧಿ ಇರುವುದು. ಉಳಿದವರೆಲ್ಲರೂ ಮಂಕುಗಳು. ಅಲ್ಲವೇ? ಕಲ್ಲಿನಿಂದ ನೀವು ಯಾರ ತಲೆ ಒಡೆಯುತ್ತಿರುವಿರೆಂಬುದು ಯಾರಿಗೂ ತಿಳಿಯದೇ?" ಎಂದಳು ಹೇಮಾಂಗಿನಿ ಸ್ಥಿರಭಾವದಿಂದ.

ಕಾದಂಬಿನಿಯು ಈಗ ತನ್ನ ನಿಜರೂಪವನ್ನು ಧರಿಸಿದಳು. ಮುಖವನ್ನು ಗಂಟಿಕ್ಕಿಕೊಂಡು, ಕೈಕಾಲು, ಮುಖ–ಬಾಯಿಗಳನ್ನು ತಿರುಗಿಸುತ್ತ "ಯಾರಿಗಾದರೂ ತಿಳಿಯಲಿ. ದೋಷ ಯಾರದೋ ಅವರಿಗೇ ಕೆಟ್ಟದ್ದಾಗುವುದು ನಿನಗೇ ಮಾತುಗಳೆಲ್ಲವೂ ಗೊತ್ತು, ನನಗೆ ಗೊತ್ತಿಲ್ಲವೆಂದು ತಿಳಿದೆಯಾ?

ಕೃಷ್ಣ ಇಲ್ಲಿಗೆ ಬಂದ ಹೊಸದರಲ್ಲಿ ಒಂದೆರಡು ಏಟು ಕೊಟ್ಟರೂ ಸಹ ಸುಮ್ಮ ನಿರುತ್ತಿದ್ದ. ನಾನು ಹೇಳಿದ ಕೆಲಸವನ್ನು ಮರುಮಾತಾಡದೆ ಮಾಡುತ್ತಿದ್ದ. ಈ ದಿವಸ ಮಧ್ಯಾಹ್ನ ಎಂತಹ ಜವಾಬು ಕೊಟ್ಟು ಹೋದ ಗೊತ್ತೇ? ದಾಸಿ ಯನ್ನೇ ಕೇಳಿ ನೋಡು!" ಎಂದು ದಾಸಿಯ ಕಡೆಗೆ ಕೈಮಾಡಿ ತೋರಿಸಿದಳು.

ದಾಸಿಯು ಹೇಮಾಂಗಿನಿಯ ಕಡೆಗೆ ತಿರುಗಿ "ಅವರು ಹೇಳುವುದು ನಿಜ. ಈ ದಿವಸ ಮಧ್ಯಾಹ್ನ ಅವನು ಅನ್ನ ಬಿಟ್ಟಿದ್ದಾಗ ಈ ಅನ್ನವನ್ನು ತಿನ್ನ ದೆಯೇ ಯಮರಾಜನಿಗೆ ಈ ಶರೀರವನ್ನು ಕೊಡಬೇಕೆಂದಿರುವಾಗ ಇಷ್ಟೊಂದು ಪೌರುಷವಾದರೂ ಏಕೆ? ಎಂದು ಕೇಳಿದರು. ಅದಕ್ಕವನು ತನ್ನ ಚಿಕ್ಕಕ್ಕ ಇರುವ ವರೆಗೂ ನನಗಾರ ಭಯವೂ ಇಲ್ಲ!" ಎಂದು ಹೇಳಿ ಎದ್ದು ಹೋದ.

ಕಾದಂಬಿನಿಯು ದರ್ಪದಿಂದ "ಈಗಲಾದರೂ ತಿಳಿಯಿತೇ ಅವನು ಯಾವ ಧೈರ್ಯದಿಂದ ಇಷ್ಟೊಂದು ಪ್ರತಾಪ ತೋರಿಸಿದನೆಂಬುದು? ಇದೋ ನೋಡು ಹೇಮಾ! ಈ ದಿವಸ ನಾನು ಖಂಡಿತವಾಗಿಯೂ ಹೇಳಿಬಿಡುವೆನು— ನೀನು ಅವನನ್ನು ಆಗಾಗ್ಗೆ ಕರೆಯುತ್ತಿರಬೇಡ. ಅಕ್ಕ—ತಮ್ಮಂದಿರ ನಡುವೆ ನೀನು ಬರಬೇಡ!" ಎಂದು ಹೇಳಿದಳು.

ಹೇಮಾಂಗಿನಿ ಪುನಃ ಏನೂ ಹೇಳಲಿಲ್ಲ. ಸರ್ಪದಿಂದಾಗುವ ಕೆಲಸವು ಹಗ್ಗದಿಂದಾಯಿತೆಂಬುದನ್ನು ಕೇಳಿ ಅವಳ ಆಶ್ಚರ್ಯಕ್ಕೆ ಮೇರೆಯೇ ಇರಲಿಲ್ಲ. ಅವಳು ಕಿಟಕಿಯ ಬಳಿಯಿಂದ ದೂರ ಸರಿದು ನಿಂತಳು. "ಏನೂ ಅರಿಯದ ಆ ಬಾಲಕನ ಬಾಯಿಂದ ಇಂತಹ ಮಾತು ಹೊರಡಬೇಕಾಗಿದ್ದರೆ, ಅವನಿಗಾದ ಭಾರಿಯ ಉತ್ಪೀಡನೆಯು ಎಂತಹದಿರಬೇಕು!" ಎಂದು ಯೋಚಿಸತೊಡ ಗಿದಳು.

ಹೇಮಾಂಗಿನಿಗೆ ಪುನಃ ಜ್ವರದ ಚಿಹ್ನೆಗಳು ಕಾಣಿಸಿಕೊಳ್ಳತೊಡಗಿದುವು. ಆದ್ದರಿಂದ ಅವಳು ಈ ಅಸಮಯದಲ್ಲೂ ನಿರ್ಜೀವಳಂತೆ ಮಂಚದ ಮೇಲೆ ಬಿದ್ದಿದ್ದಳು. ಅವಳ ಪತಿಯು ಕೊಠಡಿಯನ್ನು ಪ್ರವೇಶಿಸಿ ಆ ಕಡೆಗೆ ಧ್ಯಾನ ವನ್ನೇ ಕೊಡದೆ, ಕೋಪದಿಂದ "ಈ ದಿವಸ ಅತ್ತಿಗೆಯ ತಮ್ಮನ ವಿಚಾರ ವಾಗಿ ಏನು ಜಗಳ ಶುರು ಮಾಡಿದೆ? ಯಾರೆಷ್ಟು ಹೇಳಿದರೂ ಕೇಳುವುದಿಲ್ಲ. ಯಾವಳೋ ಅಭಾಗ್ಯ ಲಕ್ಷ್ಮಿಯು ಬಿಟ್ಟು ಹೋದ ಹುಡುಗನಿಗಾಗಿ ಈ ರೀತಿ

ಏಕೆ ಹೊಡೆದಾಡುವೆ? ಪ್ರತಿನಿತ್ಯದ ಈ ಪರಿಯ ಜಗಳ ನನ್ನಿಂದ ಸಹಿಸಲಾಗುವುದಿಲ್ಲ. ಈ ದಿನ ಅತ್ತಿಗೆಯವರಿಂದ ನಾಲ್ಕಾರು ಕಠೋರ ವಾಕ್ಯಗಳನ್ನು ನಿಷ್ಕಾರಣವಾಗಿ ನಾನು ಕೇಳಬೇಕಾಯಿತು!" ಎಂದು ಹೇಳಿದ.

ಹೇಮಾಂಗಿನಿಯು ಶಾಂತ ಸ್ವರದಿಂದ "ಪಾಪ! ನಿಮ್ಮ ಅತ್ತಿಗೆಯವರು ಕಾರಣವರಿತು ಯಾವಾಗ ತಾನೇ ಮಾತನಾಡುವರು—ಈ ದಿವಸ ಮಾತ್ರ ನಿಷ್ಕಾರಣವಾಗಿ ನಿಮ್ಮನ್ನು ಅನ್ನುವುದಕ್ಕೆ?" ಎಂದಳು.

"ಆದರೆ ಈ ದಿವಸ ಅವರು ನಿಜವಾದುದನ್ನೇ ಹೇಳಿರುವರು. ನನಗೆ ನಿನ್ನ ಸ್ವಭಾವ ತಿಳಿಯದೇ? ಹಿಂದೊಮ್ಮೆ ಮನೆಯ ವನ ಕಾಯುವವನ ಮಗನ ವಿಚಾರದಲ್ಲೂ ಹೀಗೇ ಮಾಡಿದೆ. ಮೋತೀ ಕುಮಾರನ ಅಳಿಯನ ಒಳ್ಳೆಯ ತೋಟವೂ ನಿನ್ನಿಂದಲೇ ಕೈಬಿಟ್ಟು ಹೋಯಿತು. ಸಾಲದುದಕ್ಕೆ ಪೋಲೀಸರನ್ನು ಸಮಾಧಾನಗೊಳಿಸುವುದಕ್ಕಾಗಿ ೧೦೦—೧೫೦ ರೂಪಾಯಿಗಳನ್ನು ಕೈಯಿಂದ ತೆರಬೇಕಾಯಿತು. ಇದು ಒಳ್ಳೆಯದು, ಇದು ಕೆಟ್ಟದ್ದು, ಎಂಬುದರ ಜ್ಞಾನ ಸಹ ನಿನಗಿಲ್ಲವೇ? ನಿನ್ನ ಈ ಸ್ವಭಾವ ಸರಿಹೋಗುವುದಾದರೂ ಎಂದಿಗೆ?"

ಹೇಮಾಂಗಿನಿ ಮಲಗಿದ್ದವಳು ಎದ್ದು ಕುಳಿತಳು. ಪತಿಯ ಮುಖದ ಕಡೆಗೆ ದಿಟ್ಟಿಸುತ್ತ ಅವಳು "ನನ್ನ ಈ ಸ್ವಭಾವ ಸತ್ತ ಮೇಲೆಯೇ ಸರಿಹೋಗುವುದು, ಅದಕ್ಕೆ ಮುಂಚಿತವಾಗಿ ಸರಿಹೋಗುವುದಿಲ್ಲ! ನಾನೂ ಸಹ ಮಕ್ಕಳ ತಾಯಿ, ಒಂದೆರಡು ಮಕ್ಕಳನ್ನಿಟ್ಟುಕೊಂಡಿರುವೆನು, ಮತ್ತು ಮೇಲೆ ಭಗವಂತನಿರುವನು. ಇದಕ್ಕೂ ಹೆಚ್ಚಾಗಿ ನಾನು ದೊಡ್ಡವರನ್ನು ದೂಷಿಸಲಿಚ್ಛಿಸುವುದಿಲ್ಲ. ಈಗ ನನಗೆ ಮೈಯಲ್ಲಿ ಸರಿಯಾಗಿಲ್ಲ. ಸುಮ್ಮನೆ ಬಡಬಡನೆ ಮಾತನಾಡಬೇಡಿ—ಹೋಗಿ" ಎಂದು ಹೇಳಿ ಹೊದಿಕೆಯನ್ನೆಳೆದುಕೊಂಡು ಒಂದು ಪಕ್ಕಕ್ಕೆ ತಿರುಗಿ ಮಲಗಿಕೊಂಡಳು.

ವಿಪಿನನಿಗೆ ಇನ್ನು ಹೆಚ್ಚು ತರ್ಕ—ವಿತರ್ಕ ಮಾಡಲು ಸಾಹಸವುಂಟಾಗಲಿಲ್ಲ. ಆದರೆ ಅವನು ಮನಸ್ಸಿನಲ್ಲೇ ತನ್ನ ಪತ್ನಿಯ ಸಲುವಾಗಿಯೂ ಅಲ್ಲದೆ ಶನಿಯಂತೆ ಅಂಟಿದ ಆ ಕೃಷ್ಣನ ಸಲುವಾಗಿಯೂ ಬೇಸರಗೊಂಡ.

ಮರುದಿನ ಮುಂಜಾನೆ ಕಿಟಿಕಿ ತೆಗೆಯುತ್ತಲೇ ಕಾದಂಬಿನಿಯ ತೀಕ್ಷ್ಣ ಸ್ವರವು ಹೇಮಾಂಗಿನಿಯ ಕಿವಿಯನ್ನು ಪ್ರವೇಶಿಸಿತು. ಅವಳು ಪತಿಯೊಡನೆ

“ಆ ಹುಡುಗ (ಕೃಷ್ಣ) ನಿನ್ನೆಯಿಂದಲೇ ಎಲ್ಲೋ ಓಡಿಹೋಗಿರುವನು. ನೀವು ಅವನ ಪತ್ತೆಯನ್ನೇ ಮಾಡಲಿಲ್ಲವಲ್ಲಾ ?” ಎಂದು ಹೇಳಿದಳು.

“ಹಾಳಾಗಿ ಹೋಗಲಿ! ಅವನನ್ನು ಪತ್ತೆ ಮಾಡುವ ಅವಶ್ಯಕತೆಯಾದರೂ ಏನು ?” ಎಂದ ನವೀನ.

ಕಾದಂಬಿನಿಯು ಊರೆಲ್ಲ ಕೇಳುವಂತೆ ಕಿರುಚುತ್ತ “ಹಾಗಾದರೆ ಜನ ನಿಂದೆಯ ಕಾರಣದಿಂದ ನಾವು ಈ ಊರಲ್ಲಿರುವುದೇ ಕಷ್ಟವಾಗಿ ಹೋಗುವುದು. ಇಲ್ಲಿ ನಮ್ಮ ಶತ್ರುಗಳಾದರೂ ಕಮ್ಮಿ ಇರುವರೇ? ಅವನು ಎಲ್ಲಾದರೂ ಬಿದ್ದು–ಎದ್ದು ಸತ್ತು ಹೋದರೆ ಆಯಿತು ನಮ್ಮ ಗತಿ! ಮನೆಯಲ್ಲಿ ಚಿಕ್ಕವರು–ದೊಡ್ಡವರು ಎಲ್ಲರೂ ಜೈಲಿಗೆ ಹೋಗಬೇಕಾಗುವುದು–ನಾನೀಗಲೇ ಹೇಳಿರುವೆನು!” ಎಂದು ಹೇಳಿದಳು.

ಹೇಮಾಂಗಿನಿ ವಿಷಯವೆಲ್ಲವನ್ನೂ ತಿಳಿದುಕೊಂಡಳು. ನಂತರ ಕಿಟಿಕಿಯನ್ನು ಮುಚ್ಚಿ ಒಮ್ಮೆ ನಿಟ್ಟುಸುರೆಳೆದು ಅಲ್ಲಿಂದ ಬೇರೆ ಕಡೆಗೆ ಹೊರಟು ಹೋದಳು.

ಮಧ್ಯಾಹ್ನ ಅವಳು ಅಡಿಗೆಯ ಮನೆಯ ಅಂಗಳದಲ್ಲಿ ಕುಳಿತು ರೊಟ್ಟಿ ತಿನ್ನುತ್ತಿದ್ದಳು. ಅಕಸ್ಮಾತ್ತಾಗಿ ಕೃಷ್ಣ ಕಳ್ಳನಂತೆ ಶಬ್ದ ಮಾಡದೆ ಎದುರಿಗೆ ಬಂದು ನಿಂತ. ಅವನ ತಲೆಗೂದಲುಗಳು ಕೆದರಿದ್ದುವು, ಮುಖವು ಬಾಡಿತ್ತು. ಹೇಮಾಂಗಿನಿಯು “ಎಲ್ಲಿ ಓಡಿಹೋಗಿದ್ದೆ ಕೃಷ್ಣ ?” ಎಂದು ಕೇಳಿದಳು.

“ಎಲ್ಲೂ ಓಡಿ ಹೋಗಿರಲಿಲ್ಲ. ನಿನ್ನೆ ಸಂಜೆಯಾದ ನಂತರ ಅಂಗಡಿಯಲ್ಲೇ ಮಲಗಿಬಿಟ್ಟಿದ್ದೆ. ಎಚ್ಚರವಾದಾಗ ನೋಡಲು ಅರ್ಧ ರಾತ್ರಿಯಾಗಿತ್ತು. ಚಿಕ್ಕಕ್ಕ, ಬಹಳ ಹಸಿವೆಯಾಗುತ್ತದೆ.”

“ಹೋಗು, ಆ ಮನೆಯಲ್ಲೇ ಹೋಗಿ ಊಟಮಾಡು!” ಎಂದು ಹೇಳಿ ಹೇಮಾಂಗಿನಿಯು ಪುನಃ ರೊಟ್ಟಿ ತಿನ್ನತೊಡಗಿದಳು.

ಒಂದು ನಿಮಿಷ ಸುಮ್ಮನೆ ನಿಂತಿದ್ದು ನಂತರ ಹೊರಡಲನುವಾದ ಕೃಷ್ಣ. ಆಗ ಹೇಮಾಂಗಿನಿಯು ಅವನನ್ನು ಕರೆದು ಕುಳ್ಳಿರಿಸಿದಳು, ಮತ್ತು ಅವನಿಗೆ ಅಲ್ಲೇ ಸ್ಥಳ ಸರಿಮಾಡಿ ಊಟಕ್ಕೆ ಬಡಿಸುವಂತೆ ಅಡಿಗೆಯವಳಿಗೆ ತಿಳಿಸಿದಳು.

ಕೃಷ್ಣ ಇನ್ನೂ ಅರ್ಧಊಟ ಸಹ ಮಾಡಿರಲಿಲ್ಲ. ಅಷ್ಟರಲ್ಲಿ ಉಮಾ ಗಾಬರಿಯಿಂದ ಓಡಿಬಂದು ಕೈಸನ್ನೆಯಿಂದ ತಂದೆಯು ಬರುತ್ತಿರುವರೆಂದು ತೋರಿಸಿದಳು.

ಹುಡುಗಿಯ ಈ ರೀತಿಯ ವ್ಯವಹಾರವನ್ನು ಕಂಡು ತಾಯಿಗೆ ಅತ್ಯಾಶ್ಚರ್ಯವಾಯಿತು. ಅವಳು "ಬಂದರೆ ಬರಲಿ! ಅದಕ್ಕೆ ನೀನೇಕೆ ಹೀಗಾಡುವೆ?" ಎಂದಳು.

ಉಮಾ ಕೃಷ್ಣನ ಹಿಂದುಗಡೆ ನಿಂತಿದ್ದಳು. ತಾಯಿಯ ಪ್ರಶ್ನೆಗುತ್ತರವಾಗಿ ಅವಳು ಕೈಬೆರಳಿನಿಂದ ಕೃಷ್ಣನನ್ನು ತೋರಿಸುತ್ತ, ಕಣ್ಣುಗಳನ್ನು ಮಿಟುಕಿಸಿ ಸನ್ನೆಯಿಂದಲೇ "ಇವನು ಊಟಮಾಡುತ್ತಿರುವನಲ್ಲಾ ?" ಎಂದಳು.

ಕೃಷ್ಣ ಕುತೂಹಲದಿಂದ ಮುಖವನ್ನು ತಿರುಗಿಸಿ ಉಮೆಯ ಕಡೆ ನೋಡುತ್ತಿದ್ದ. ಅವಳ ಉತ್ಕಂಠಿತ ದೃಷ್ಟಿಯನ್ನೂ ಶಂಕಿತ ಮುಖದ ಸಂಕೇತಗಳನ್ನೂ ಅವನು ನೋಡಿದ. ಕ್ಷಣದಲ್ಲೇ ಅವನ ಮೋರೆ ಪೆಚ್ಚಾಯಿತು. ಅವನ ಮನಸಿಗೆ ಎಷ್ಟು ಹೆದರಿಕೆಯಾಯಿತೆಂಬುವನ್ನು ಅವನೇ ಬಲ್ಲ! "ಭಾವ ಬರುತ್ತಿರುವರು ಚಿಕ್ಕಕ್ಕ!" ಎಂದು ಹೇಳಿ, ಅನ್ನದ ತಟ್ಟೆಯನ್ನು ಹಾಗೆಯೇ ಬಿಟ್ಟಿದ್ದು ಅಡಿಗೆಯ ಮನೆಯ ಬಾಗಿಲ ಹಿಂದೆ ಅಡಗಿಕೊಂಡ. ಅವನನ್ನು ನೋಡಿ ಉಮೆಯೂ ಮತ್ತೊಂದು ಕಡೆಗೆ ಓಡಿ ಹೋದಳು. ಮನೆಯ ಒಡೆಯನು ಬಂದಾಗ ಕಳ್ಳರು ಹೆದರಿ ಓಡಿಹೋಗುವಂತೆ ಅಥವಾ ಮರೆಸಿಕೊಳ್ಳುವಂತೆ ಈ ಇಬ್ಬರು ಹುಡುಗರೂ ಮಾಡಿದರು. ಏನೂ ತೋರದವಳಂತೆ ಹೇಮಾಂಗಿನಿ ಒಂದು ಸಲ ಆ ಕಡೆಗೆ ಒಂದು ಸಲ ಈ ಕಡೆಗೆ ನೋಡಿದಳು. ನಂತರ ಪರಿಶ್ರಾಂತಳಂತೆ ಗೋಡೆಗೆ ತಲೆಯೊರಗಿಸಿ ಸುಮ್ಮನೆ ಕುಳಿತುಕೊಂಡಳು. ಅವಳಿಗೆ ಲಜ್ಜೆ ಮತ್ತು ಅಪಮಾನವೆಂಬ ಶೂಲದಿಂದ ಎದೆಯನ್ನು ಇರಿದಂತಾಯಿತು. ಆ ಸಮಯಕ್ಕೆ ಸರಿಯಾಗಿ ವಿಪಿನನು ಎದುರಿಗೆ ಬಂದು ನಿಂತ. ಹೇಮಾಂಗಿನಿಯು ಆ ರೀತಿ ಕುಳಿತಿರುವುದನ್ನು ಕಂಡು, ಹತ್ತಿರ ಬಂದು ಉದ್ವಿಗ್ನ ಭಾವದಿಂದ "ಇದೇನು? ಊಟವನ್ನು ಮುಂದಿಟ್ಟುಕೊಂಡು ಹೀಗೆ ಸುಮ್ಮನೆ ಕುಳಿತಿರುವೆ ? ಎಂದು ಕೇಳಿದ.

ಹೇಮಾಂಗಿನಿ ಏನೂ ಉತ್ತರ ಕೊಡಲಿಲ್ಲ. ವಿಪಿನನು ಮತ್ತಷ್ಟು ಉತ್ಕಂಠಿತನಾಗಿ "ಏಕೆ? ಪುನಃ ಜ್ವರ ಬಂದಿತೇ?" ಎಂದು ಕೇಳಿದ. ಅಷ್ಟ

ರಲ್ಲಿ ಅವನ ದೃಷ್ಟಿ ಕೃಷ್ಣನು ಅರ್ಧ ತಿಂದು ಬಿಟ್ಟು ಹೋಗಿದ್ದ ಆ ತಟ್ಟೆಯ ಮೇಲೆ ಬಿತ್ತು. "ಇಷ್ಟು ಅನ್ನವನ್ನು ತಟ್ಟೆಯಲ್ಲಿ ಬಿಟ್ಟು ಎದ್ದು ಹೋದವರು ಯಾರು ಲಲಿತ? ಎಂದು ಕೇಳಿದ.

ಹೇಮಾಂಗಿನಿ ಒಮ್ಮೆ ಎದ್ದು ಕುಳಿತುಕೊಂಡು "ಇಲ್ಲ, ಆ ಮನೆಯ ಕೃಷ್ಣ ಊಟ ಮಾಡುತ್ತಿದ್ದ. ನಿಮ್ಮ ಹೆದರಿಕೆಗಾಗಿ ಬಾಗಿಲ ಹಿಂದುಗಡೆ ಅಡಗಿಕೊಂಡಿರುವನು." ಎಂದು ಹೇಳಿದಳು.

"ಏಕೆ?"

"ಏಕೆಂಬುದು ನಿಮಗೇ ಚೆನ್ನಾಗಿ ಗೊತ್ತು. ಅದಿರಲಿ ನೀವು ಬರುತ್ತಿರುವುದನ್ನು ತಿಳಿಸಿಬಿಟ್ಟು, ಉಮಾ ಸಹ ಇಲ್ಲಿ ನಿಲ್ಲದೆ ಓಡಿ ಹೋದಳು." ಎಂದಳು ಹೇಮಾಂಗಿನಿ.

ಹೆಂಡತಿಯ ಮಾತುಗಳು ಸರಿಯಾದ ಹಾದಿ ಹಿಡಿದು ಹೋಗುತ್ತಿರಲಿಲ್ಲವೆಂದು ವಿಪಿನ ಮನಸ್ಸಿನಲ್ಲೇ ತಿಳಿದುಕೊಂಡ. ಆದ್ದರಿಂದ ಆಕೆಯನ್ನು ಹಾದಿಗೆ ತರಬೇಕೆಂದು ಬಯಸಿ, ಸ್ವಲ್ಪ ನಗುತ್ತ "ಅವಳು ಯಾವ ಭಯದಿಂದ ಓಡಿ ಹೋದಳು ?" ಎಂದು ಕೇಳಿದ.

"ನಾನೇನು ಬಲ್ಲೆ ? ಮಾತೆಯ ಅಪಮಾನವನ್ನು ಕಣ್ಣಾರೆ ನೋಡಬೇಕಾದೀತಲ್ಲ. ಎಂಬ ಹೆದರಿಕೆಯಿಂದ ಬಹುಶಃ ಓಡಿ ಹೋಗಿರಬಹುದು." ಎಂದಳು. ಮರುಕ್ಷಣವೇ ಒಮ್ಮೆ ನಿಟ್ಟುಸುರ್ಗರೆದು "ಕೃಷ್ಣನಾದರೆ ಕಂಡವರ ಹುಡುಗ, ಅವನು ಬಚ್ಚಿಟ್ಟುಕೊಳ್ಳುವುದು ಸಹಜ. ಆದರೆ ಹೊಟ್ಟೆಯಲ್ಲಿ ಹುಟ್ಟಿದ ಮಗಳಿಗೂ ಸಹ ತನ್ನ ತಾಯಿಗೆ ಇತರರನ್ನು ಕರೆದು ಒಂದು ತುತ್ತು ಅನ್ನ ನೀಡುವಷ್ಟು ಅಧಿಕಾರವಿಲ್ಲವೆಂದು ಎನಿಸಿತೇ?" ಎಂದಳು ಹೇಮಾಂಗಿನಿ.

ವಿಪಿನನು ಮನಸ್ಸಿನಲ್ಲೇ ಮಾತು ಬಹಳ ಮುಂದುವರಿಯಿತೆಂದು ತಿಳಿದುಕೊಂಡ. ಅದು ಮತ್ತಷ್ಟು ಉಗ್ರರೂಪವನ್ನು ತಾಳದಿರಲೆಂಬ ಉದ್ದೇಶದಿಂದ ಅವನು ಈ ದೋಷಾರೋಪವನ್ನು ಪರಿಹಾಸ್ಯವಾಗಿ ಭಾವಿಸಿದಂತೆ ನಟಿಸಿ, ಕಣ್ಣುಗಳನ್ನು ಮಿಟುಕಿಸಿ ತಲೆಯಲ್ಲಾಡಿಸಿ "ಇಲ್ಲ ನಿನಗೆ ಯಾವ ಅಧಿಕಾರವೂ ಇಲ್ಲ. ಯಾವನಾದರೂ ಭಿಕ್ಷುಕ ಬಂದರೆ ಅವನಿಗೆ ಭಿಕ್ಷೆ ನೀಡುವ ಅಧಿಕಾರ ಸಹ ನಿನಗಿಲ್ಲ !—ಸರಿ, ಈಗ ಈ ಮಾತು ಹಾಗಿರಲಿ ನಿನ್ನೆಯಿಂದ

ನಿನಗೆ ಪುನಃ ತಲೆನೋವು ಇಲ್ಲವಷ್ಟೆ ? ಪೇಟೆಯಿಂದ ಕೇದಾರ ಡಾಕ್ಟರನ್ನು ಕರೆತರಲೇ—ಎಂದು ಯೋಚಿಸುತ್ತಿರುವೆನು. ಇಲ್ಲದಿದ್ದರೆ ಇನ್ನೊಂದು ಸಲ ಕಲಕತ್ತೆಗೆ..............." ಎಂದ.

ರೋಗ ಮತ್ತು ಚಿಕಿತ್ಸೆಯ ವಿಚಾರ ವಿನಿಮಯವು ಅಷ್ಟಕ್ಕೇ ನಿಂತಿತು. ಹೇಮಾಂಗಿನಿಯು "ನೀವು ಉಮಾನ ಎದುರಿಗೆ ಕೃಷ್ಣನ ಬಗ್ಗೆ ಏನಾದರೂ ಹೇಳಿದಿರಾ ?" ಎಂದು ಕೇಳಿದಳು.

ವಿಪಿನನಿಗೆ ಆಕಾಶದಿಂದ ಕೆಳಗೆ ಬಿದ್ದಂತಾಯಿತು. ಅವನು ಚಕಿತನಾಗಿ "ನಾನೇ ? ಇಲ್ಲವಲ್ಲಾ—ನಾನೇನೂ ಹೇಳಲಿಲ್ಲವಲ್ಲಾ ? ಓಹೋ, ಹೌದು! ಈಗ ನೆನಪು ಬಂತು. ಆ ದಿನ ಏನೋ ಹೇಳಿರಬಹುದು. ಅತ್ತಿಗೆಯವರು ಕೋಪ ಮಾಡಿಕೊಳ್ಳುವರು,—ಅಣ್ಣ ಕೋಪಗೊಳ್ಳುವನು. ಬಹುಶಃ ಉಮಾ ಅಲ್ಲಿ ನಿಂತು ಕೇಳಿಕೊಂಡಿರಬೇಕು! ನಿನಗೆ ಗೊತ್ತೇ...........?

" ನನಗೆಲ್ಲಾ ಗೊತ್ತು " ಎಂದು ಹೇಳಿ ಮಾತನ್ನು ಅಷ್ಟಕ್ಕೇ ಮುಗಿಸಿದಳು ಹೇಮಾಂಗಿನಿ. ವಿಪಿನನು ಅಡಿಗೆಯ ಮನೆಗೆ ಹೋದ ಕೂಡಲೇ ಅವಳು ಕೃಷ್ಣನನ್ನು ಕರೆದು "ಕೃಷ್ಣ! ಈ ಒಂದಾಣೆ ತೆಗೆದುಕೊ. ಅಂಗಡಿಗೆ ಹೋಗಿ ಕಡಲೆ–ಪುರಿ ಕೊಂಡುಕೊಂಡು ತಿನ್ನು. ಇನ್ನು ಮೇಲೆ ಹಸಿವೆಯಾದರೆ ನನ್ನ ಬಳಿಗೆ ಬರಬೇಡ. ಹೊರಗಿನವರಿಗೆ ಒಂದು ತುತ್ತು ಅನ್ನ ಹಾಕುವಷ್ಟು ಯೋಗ್ಯತೆ ಮತ್ತು ಅಧಿಕಾರ ಸಹ ನಿನ್ನ ಚಿಕ್ಕಕ್ಕನಿಗಿಲ್ಲ.'' ಎಂದಳು.

ಕೃಷ್ಣ ಮರುಮಾತಾಡದೆ ಅಲ್ಲಿಂದ ಹೊರಟು ಹೋದ. ಒಳಗಡೆ ನಿಂತು ವಿಪಿನನು ಹಲ್ಲು ಹಲ್ಲು ಕಡಿಯುತ್ತ ಅವನ ಕಡೆಗೆ ಕ್ರೋಧಪೂರ್ಣ ದೃಷ್ಟಿಯಿಂದ ನೋಡಿದ.

ನಾಲ್ಕೈದು ದಿನಗಳು ಕಳೆದುವು. ಒಂದು ದಿನ ಮಧ್ಯಾಹ್ನ ವಿಪಿನ ಬಹಳ ವಿರಕ್ತ ಹಾಗೂ ಉದಾಸೀನ ಭಾವದಿಂದ ಮನೆಯನ್ನು ಪ್ರವೇಶಿಸಿದ. ಒಳಗೆ ಬಂದೊಡನೆಯೇ ಅವನು ಹೇಮಾಂಗಿನಿಯನ್ನು ಕುರಿತು "ನೀನು ಈ ರೀತಿ ದಿನಾಲು ಜಗಳವಾಡುವೆ ಏಕೆ ? ಕೃಷ್ಣ ನಿನಗೆಲ್ಲಿಯ ಸಂಬಂಧದವ ? ಆ ಕಂಡವರ ಹುಡುಗನಿಗಾಗಿ ಹಗಲು ರಾತ್ರಿ ಮನೆಯವರೊಡನೆ ಜಗಳವಾಡುವೆಯಲ್ಲಾ ? ಈ ದಿವಸ ಅಣ್ಣನಿಗೂ ಸಹ ಬಹಳ ಕೋಪ ಬಂದಿರುವಂತೆ ತೋರುತ್ತದೆ!'' ಎಂದು ಹೇಳಿದ.

ಸ್ವಲ್ಪ ಹೊತ್ತಿನ ಮುಂಚೆ ಕಾದಂಬಿನಿಯು ತನ್ನ ಮನೆಯಲ್ಲಿ ಕುಳಿತ್ತು ಪತಿಯ ಸಂಗಡ ಹೇಮಾಂಗಿನಿಯ ವಿಚಾರವಾಗಿ ಆಡಿದ ಅಪಶಬ್ದದ ಬಾಣ ಗಳಲ್ಲಿ ಒಂದೂ ವ್ಯರ್ಥವಾಗಿ ಹೋಗಲಿಲ್ಲ. ಅವೆಲ್ಲವೂ ಒಂದೊಂದಾಗಿ ಬಂದು ಹೇಮಾಂಗಿಯ ಹೃದಯವನ್ನಿರಿದುವು. ಅವಳ ಒಂದೊಂದು ವಾಕ್ಯವೂ ಹೇಮಾಂಗಿನಿಯ ಹೊಟ್ಟೆಯಲ್ಲಿ ಬೆಂಕಿಯನ್ನು ಹಾಕುತ್ತಿತ್ತು. ಆದರೆ ಭಾವನವರು ನಡುವೆ ಕುಳಿತಿದ್ದುದರಿಂದ ಅವಳು ತನ್ನ ಕೋಪವೆಲ್ಲವನ್ನೂ ಅಡ ಗಿಸಿಕೊಂಡು ಸುಮ್ಮನಿರಬೇಕಾಯಿತು.

ಹಿಂದಿನ ದಿನಗಳಲ್ಲಿ ವಿಜಯ ಪ್ರಾಪ್ತಿಯ ಇಚ್ಛೆಯಿಂದ ಯವನರು ಯುದ್ಧ ಮಾಡುವಾಗ ತಮ್ಮ ಸೇನೆಯ ಮುಂದೆ ಗೋವುಗಳನ್ನು ನಿಂದಿರಿಸಿ ರಾಜಪುತ್ರರ ಸೇನೆಯ ಮೇಲೆ ಬಾಣಗಳ ಸುರಿಮಳೆ ಕರೆಯುತ್ತಿದ್ದರು. ಅದೇ ರೀತಿ ಇತ್ತೀಚೆಗೆ ಕಾದಂಬಿನಿಯು ತನ್ನ ಪತಿಯನ್ನು ಮುಂದಿರಿಸಿಕೊಂಡು ಹೇಮಾಂಗಿನಿಯನ್ನು ಹೆದರಿಸಿ ಸೋಲಿಸುತ್ತಿದ್ದಳು.

ಪತಿಯ ಮಾತನ್ನು ಕೇಳಿ ಹೇಮಾಂಗಿನಿಯು ಗಾಬರಿಗೊಂಡಳು. ಅವಳು "ಇದೇನು ಹೀಗೆನ್ನುವಿರಿ ? ಭಾವನವರಿಗೆ ಸಹ ಕೋಪ ಬಂದು ಬಿಟ್ಟಿತೇ ? ಈ ಆಶ್ಚರ್ಯಕರ ಮಾತನ್ನು ಕೇಳಿ ನನಗಂತೂ ನಂಬಿಕೆಯೇ ಉಂಟಾಗುವು ದಿಲ್ಲ ! ಈಗ ಏನು ಮಾಡುವುದರಿಂದ ಅವರ ಕೋಪವು ಶಾಂತವಾಗುವುದು?" ಎಂದು ಕೇಳಿದಳು.

ವಿಪಿನನು ಮನಸ್ಸಿನಲ್ಲೇ ಬಹಳ ಕೋಪಗೊಂಡ. ಆದರೆ ಮನಸ್ಸಿನ ಕೋಪವನ್ನು ಹೊರಗಡೆ ಪ್ರಕಟಿಸುವುದು ಅವನ ಸ್ವಭಾವವಾಗಿರಲಿಲ್ಲ. ಆದ್ದರಿಂದ ಅವನು ಕೋಪವನ್ನು ಮನಸ್ಸಿನಲ್ಲೇ ಅಡಗಿಸಿಕೊಂಡು ಸಹಜಭಾವ ದಿಂದ "ಏನೇ ಆಗಲಿ, ದೊಡ್ಡವರ ವಿಚಾರದಲ್ಲಿ............" ಎಂದ.

ಮಾತು ಮುಗಿಯುವಷ್ಟರಲ್ಲೇ ಹೇಮಾಂಗಿನಿಯು "ನನಗೆಲ್ಲಾ ಗೊತ್ತು! ದೊಡ್ಡವರ ಮಾನ-ಮರ್ಯಾದೆಯ ಜ್ಞಾನವಿಲ್ಲದಿರಲು ನಾನೇನು ಚಿಕ್ಕ ಮಗುವೇ ? ಆದರೆ ನಾನು ಆ ಹುಡುಗನನ್ನು ಪ್ರೀತಿಸುವೆನೆಂಬುದು ಮಾತ್ರ ನಿಜ. ಆದ್ದರಿಂದ ಅವರು ನನ್ನ ನೆಪದಿಂದ ಆ ಹುಡುಗನನ್ನು ಬಹಳವಾಗಿ ಹಿಂಸಿಸುವರು !" ಎಂದಳು.

ಒಮ್ಮೆಗೇ ಇಷ್ಟಕ್ಕಿದ್ದಂತೆ ಅವಳ ಧ್ವನಿ ಸ್ವಲ್ಪ ನಮ್ರವಾಯಿತು. ಭಾವ ನವರ ವಿಚಾರವಾಗಿ ಈ ರೀತಿ ಮಾತನಾಡಿದುದಕ್ಕಾಗಿ ಅವಳಿಗೆ ಮನಸ್ಸಿನಲ್ಲೇ ಒಂದು ವಿಧವಾದ ನಾಚಿಕೆಯುಂಟಾಯಿತು. ಆದರೂ ಕೋಪವನ್ನು ತಡೆಯು ಲಾಗಲಿಲ್ಲ. ವಿಪಿನನು ಒಳಗಿಂದೊಳಗೆ ಅವರ ಪಕ್ಷಕ್ಕೇ ಇದ್ದ. ಒಬ್ಬ ಕಂಡ ವರ ಹುಡುಗನಿಗಾಗಿ ತನ್ನ ಅಣ್ಣನೊಡನೆ ವ್ಯರ್ಥವಾಗಿ ಜಗಳವಾಡುವುದು ಅವ ನಿಗೆ ಇಷ್ಟವಿರಲಿಲ್ಲ. ಹೇಮಾಂಗಿನಿಯ ಮುಖಭಾವದಿಂದ ಅವಳ ಲಜ್ಜೆಯನ್ನು ಅರಿತುಕೊಂಡು, ಇದೇ ಸಮಯವೆಂದು ತಿಳಿದು ವಿಪಿನ ಸ್ವಲ್ಪ ಜೋರಿನಿಂದ "ಹಿಂಸಿಸುವುದೂ ಇಲ್ಲ. ಏನೂ ಇಲ್ಲ. ಅವರು ತಮ್ಮ ಹುಡುಗನನ್ನು ಭಯ ದಲ್ಲಿ, ಬಿಗಿಯಲ್ಲಿ ಇರಿಸಿಕೊಳ್ಳುವರು. ಕೆಲಸ–ಕಾರ್ಯಗಳನ್ನು ಕಲಿಸಿ ಕೊಡುವರು. ಅದರಿಂದ ನಿನಗೆ ತೊಂದರೆಯಾದರೆ ಯಾರೇನು ಮಾಡಲಾಗು ವುದು ? ಅದೂ ಅಲ್ಲವೆ ಎಷ್ಟೆಂದರೂ ಅವರು ದೊಡ್ಡವರು. ಇಷ್ಟ ಬಂದಂತೆ ಮಾಡಬಹುದು" ಎಂದು ಹೇಳಿದ.

ಹೇಮಾಂಗಿನಿಯು ಪತಿಯ ಮುಖದ ಕಡೆಗೆ ನೋಡಿ ಮೊದಲು ಸ್ವಲ್ಪ ವಿಸ್ಮಿತಳಾದಳು. ಈಗ ಹದಿನೈದು ಹದಿನಾರು ವರ್ಷಗಳಿಂದ ಅವಳು ಸಂಸಾರ ನಡೆಸುತ್ತಿದ್ದರೂ ತನ್ನ ಪತಿಯ ಇಂತಹ ಅಪಾರ ಭ್ರಾತೃ–ಭಕ್ತಿಯನ್ನು ಅವ ಳೆಂದೂ ಕಂಡಿರಲಿಲ್ಲ. ಆದರೆ ಪುನಃ ಕೋಪದಿಂದ ಅವಳ ಶರೀರವೆಲ್ಲ ಉರಿಯ ತೊಡಗಿತು. ಅವಳು ಕೋಪದಿಂದ "ಅವರು ಗುರು ಜನರೇ ಆಗಲಿ, ದೊಡ್ಡವರೆ ಆಗಲಿ! ನಾನು ಮಾತೆಯಾಗಿರುವೆನು! ಗುರುಜನರು ತಮ್ಮ ಮಾನವನ್ನು ತಾವೇ ನಿಃಶ್ಶೇಷ ಮಾಡಿಕೊಂಡರೆ ಅದಕ್ಕೆ ನಾನೇನು ಮಾಡಲಾಗುವುದು ?" ಎಂದಳು.

ವಿಪಿನನು ಅವಳ ಈ ಮಾತಿಗೆ ಏನೋ ಉತ್ತರ ಕೊಡಬೇಕೆಂದಿದ್ದ. ಆದರೆ ಅಷ್ಟರಲ್ಲೇ ಸುಮ್ಮನಾದ. ಬಾಗಿಲ ಹೊರಗಿನಿಂದ 'ಚಿಕ್ಕಕ್ಕ!' ಎಂಬ ವಿನಮ್ರ ಶಬ್ದವು ಕೇಳಿಬಂತು.

ಪತಿ–ಪತ್ನಿಯರು ಒಬ್ಬರಮುಖವನ್ನೊಬ್ಬರು ನೋಡತೊಡಗಿದರು. ವಿಪಿ ನನು ಒಮ್ಮೆ ಮುಗುಳುನಗೆ ನಕ್ಕ. ಆದರೆ ಅವನ ಆ ನಗೆಯಲ್ಲಿ ಪ್ರೀತಿಯು ಹುಳಿವಿರಲಿಲ್ಲ. ಹೇಮಾಂಗಿನಿಯೂ ಒಮ್ಮೆ ಮುಗುಳುನಗೆ ನಕ್ಕು ಬಾಗಿಲ ಬಳಿ

ಬಂದಳು ಮತ್ತು ಸ್ತಬ್ಧಳಾಗಿ ಕೃಷ್ಣನ ಮುಖವನ್ನು ನೋಡತೊಡಗಿದಳು. ಅವಳನ್ನು ನೋಡಿದೊಡನೆಯೇ ಕೃಷ್ಣನಿಗೆ ಹೊಟ್ಟೆ ಹಿಡಿಸಲಾರದಷ್ಟು ಆನಂದ ಉಕ್ಕಿ ಬಂತು. "ಚಿಕ್ಕಕ್ಕ! ದೇಹಸ್ಥಿತಿ ಹೇಗಿದೆ?" ಎಂಬುದೇ ಅವನ ಮೊದಲನೆಯ ಪ್ರಶ್ನೆಯಾಗಿತ್ತು.

ಕ್ಷಣಕಾಲ ಹೇಮಾಂಗಿನಿಗೆ ಏನೂ ಮಾತನಾಡಲಾಗಲಿಲ್ಲ. ಯಾರ ವಿಚಾರವಾಗಿ ಪತಿ–ಪತ್ನಿಯರಲ್ಲಿ ಇಷ್ಟು ಹೊತ್ತೂ ಅಪಾರ ವಾದ–ವಿವಾದ ನಡೆಯಿತೋ ಅವನೇ ಎದುರಿಗೆ ಬಂದು ನಿಂತಿದ್ದನ್ನು ಕಂಡು ಅವಳಿಗೆ ದಿಕ್ಕು ತೋರದಂತಾಯಿತು. ಹೇಮಾಂಗಿನಿಯು ಮೆಲ್ಲನೆಯ ಹಾಗೂ ಕಠೋರ ಸ್ವರದಿಂದ "ಇಲ್ಲೇನಿದೆ? ದಿನಾಲು ನೀನು ಇಲ್ಲೇಕೆ ಬರುವೆ?" ಎಂದಳು.

ಕೃಷ್ಣನ ಎದೆ ಡಬಡಬನೆ ಹೊಡೆದುಕೊಳ್ಳಲಾರಂಭಿಸಿತು. ಹೇಮಾಂಗಿನಿಯ ಈ ಕಠೋರ ಸ್ವರವು ಅವನಿಗೆ ಅತ್ಯಂತ ಕಠೋರವಾಗಿ ತೋರಿತು. ಏನೇ ಇರಲಿ, ಅವಳ ಈ ಮಾತುಗಳು ಸ್ನೇಹಪೂರ್ಣ ಪರಿಹಾಸ್ಯವಲ್ಲವೆಂಬುವನ್ನು ಆ ನಿರ್ಭಾಗ್ಯ ಬಾಲಕನು ಕ್ಷಣದಲ್ಲೇ ಅರಿತುಕೊಂಡ.

ಭಯ, ಲಜ್ಜೆ ಮತ್ತು ವಿಸ್ಮಯಗಳಿಂದ ಅವನ ಮುಖ ಪೆಚ್ಚಾಯಿತು. ಅವನು "ನೋಡಿಕೊಂಡು ಹೋಗಲು ಬಂದೆ" ಎಂದ.

ವಿಪಿನನು ನಕ್ಕು "ನಿನ್ನನ್ನು ನೋಡಿಕೊಂಡು ಹೋಗಲು ಬಂದಿರುವನು!" ಎಂದ.

ಅವನ ಈ ನಗೆಯಿಂದ ಹೇಮಾಂಗಿನಿಗೆ ಬಹಳ ಕೋಪ ಹಾಗೂ ದುಃಖವಾಯಿತು. ಅವಳಿಗೊಂದು ಬಗೆಯ ಅಪಮಾನದ ಅನುಭವವಾಯಿತು. ಕಾಲಿನಿಂದ ತುಳಿಯಲ್ಪಟ್ಟ ಸರ್ಪದಂತೆ ಒಮ್ಮೆ ಕೋಪದಿಂದ–ಕ್ರೂರದೃಷ್ಟಿಯಿಂದ ಪತಿಯ ಕಡೆಗೆ ನೋಡಿ, ಪುನಃ ಕೃಷ್ಣನ ಕಡೆಗೆ ದೃಷ್ಟಿ ತಿರುಗಿಸಿ "ಇನ್ನು ಮೇಲೆ ನೀನು ಇಲ್ಲಿಗೆ ಬರಬೇಡ ಹೋಗು!" ಎಂದಳು.

"ಒಳ್ಳೆಯದು!" ಎಂದು ಹೇಳಿ, ಕೃಷ್ಣ ಮುಗುಳುನಗೆಯಿಂದ ತನ್ನ ಆ ಮುಖಭಾವವನ್ನು ಮರೆಸಲೆಳಸಿದ. ಆದರೆ ಆ ಪ್ರಯತ್ನದಿಂದ ಅವನ ಮುಖವು ಮತ್ತಿಷ್ಟು ವಿಕೃತವಾಯಿತು. ಅವನು ತಲೆ ಬಗ್ಗಿಸಿಕೊಂಡು ಅಲ್ಲಿಂದ ಸುಮ್ಮನೆ ಹೊರಟುಹೋದ.

ಹೇಮಾಂಗಿನಿಯು ಪೆಚ್ಚುಮೋರೆ ಹಾಕಿಕೊಂಡು ಒಂದು ಸಲ ಪತಿಯನ್ನು ದಿಟ್ಟಿಸಿ ಸರ್ರನೆ ಕೊಠಡಿಯಿಂದ ಹೊರಗೆ ಹೊರಟುಹೋದಳು.

ನಾಲ್ಕೈದು ದಿನಗಳು ಕಳೆದುವು. ಆದರೂ ಹೇಮಾಂಗಿನಿಯ ಜ್ವರ ಕಡಿಮೆಯಾಗಲಿಲ್ಲ. ನಿನ್ನೆಯ ದಿನ ತಾನೇ ಡಾಕ್ಟರು ಬಂದು "ಎದೆಗೆ ಶೀತ ಏರಿಬಿಟ್ಟಿದೆ." ಎಂದು ಹೇಳಿ ಹೋಗಿದ್ದರು. ಆಗ ತಾನೇ ದೀಪ ಹೊತ್ತಿಸುವ ಸಮಯ, ಲಲಿತ ಒಳ್ಳೆ-ಒಳ್ಳೆಯ ಬಟ್ಟೆಗಳನ್ನು ಹಾಕಿಕೊಂಡು ಕೊಠಡಿಯನ್ನು ಪ್ರವೇಶಿಸಿ "ಅಮ್ಮಾ! ಈ ದಿನ ದತ್ತಬಾಬುಗಳ ಮನೆಯಲ್ಲಿ ಬೊಂಬೆಯ ನಾಟ್ಯವಂತೆ, ನಾನು ಹೋಗಿ ನೋಡಿಬರುವೆನು" ಎಂದ.

ತಾಯಿಯು ಸ್ವಲ್ಪ ನಕ್ಕು "ಏನೋ ಲಲಿತ! ಈಗ ನಾಲ್ಕೈದು ದಿನಗಳಿಂದ ನಿನ್ನ ತಾಯಿ ಕಾಯಿಲೆಯಾಗಿ ಮಲಗಿರುವಳು. ಒಮ್ಮೆ ಬಂದು ಪಕ್ಕದಲ್ಲಾದರೂ ಕುಳಿತುಕೊಂಡೆಯಾ?" ಎಂದಳು.

ಲಲಿತ ಲಜ್ಜಿತನಾಗಿ ಅವಳ ತಲೆಯ ಬಳಿ ಕುಳಿತುಕೊಂಡ. ತಾಯಿಯು ಸ್ನೇಹದಿಂದ ಮಗನ ಬೆನ್ನ ಮೇಲೆ ಕೈಯಾಡಿಸುತ್ತ "ಒಂದು ವೇಳೆ ಕಾಯಿಲೆ ವಾಸಿಯಾಗದೆ ನಾನು ಸತ್ತು ಹೋದರೆ, ಆಗೇನು ಮಾಡುವೆ ಲಲಿತ? ಬಹಳ ಅಳುವೆಯಾ?" ಎಂದು ಕೇಳಿದಳು.

"ಹಾಗೆಲ್ಲಾ ಹೇಳಬೇಡ ಹೋಗು. ನಿನಗೆ ವಾಸಿಯಾಗುವುದು!" ಎಂದು ಹೇಳಿ ಲಲಿತ ತನ್ನ ತಾಯಿಯ ಎದೆಯ ಮೇಲೆ ಕೈಯಿಟ್ಟ. ತಾಯಿ ಮಗನ ಕೈಯ ಮೇಲೆ ತನ್ನ ಕೈಯನ್ನಿರಿಸಿ ಸ್ವಲ್ಪ ಹೊತ್ತು ಸುಮ್ಮನಿದ್ದಳು. ಆ ಜ್ವರದ ವೇಳೆಯಲ್ಲಿ ಪುತ್ರನ ಈ ಕರಸ್ಪರ್ಶವು ಅವಳ ಸರ್ವಾಂಗವನ್ನೂ ಶೀತಲವನ್ನಾಗಿ ಮಾಡಿತು. ಇದೇ ರೀತಿ ಸಮಯವು ಕಳೆದು ಹೋಗಲೆಂದು ಅವಳಿಗೆ ಎನಿಸತೊಡಗಿತು. ಆದರೆ ಸ್ವಲ್ಪ ಹೊತ್ತಿನ ನಂತರವೇ ಲಲಿತ ಹೋಗಲು ಚಡಪಡಿಸತೊಡಗಿದ. ಬೊಂಬೆಗಳ ನಾಟ್ಯವು ಸುರುವಾಗಿ ಹೋಯಿತೋ ಏನೋ ಎಂಬ ಯೋಚನೆಯಿಂದ ಒಳಗಿಂದೊಳಗೇ ಅವನ ಮನಸ್ಸು ಚಂಚಲವಾಗತೊಡಗಿತು. ಮಗನ ಮನಸ್ಸಿನ ಮಾತನ್ನು ತಿಳಿದುಕೊಂಡು ತಾಯಿ ಮನದಲ್ಲೇ ನಕ್ಕು "ಹೋಗು ಲಲಿತ! ನೋಡಿ ಬಾ. ಆದರೆ ಬಹಳ ಹೊತ್ತು ಮಾತ್ರ ಮಾಡಬೇಡ" ಎಂದಳು.

"ಇಲ್ಲ ಅಮ್ಮಾ! ನಾನು ಬೇಗನೆ ಬಂದುಬಿಡುವೆನು." ಎಂದು ಹೇಳಿ ಲಲಿತ ಹೊರಟು ಹೋದ. ಆದರೆ ಎರಡೇ ನಿಮಿಷಗಳಲ್ಲಿ ಅವನು ಹಿಂತಿರುಗಿ ಬಂದು "ಅಮ್ಮಾ! ಒಂದು ಮಾತು ಹೇಳುವೆನು" ಎಂದ.

ತಾಯಿ ನಗುತ್ತ "ಒಂದು ರೂಪಾಯಿ ಬೇಕಲ್ಲವೇ? ಆ ಹಲಗೆಯ ಮೇಲೆ ಇಟ್ಟಿವೆ ತೆಗೆದುಕೊ! ನೋಡು, ಒಂದು ರೂಪಾಯಿಗಿಂತ ಹೆಚ್ಚಾಗಿ ತೆಗೆದುಕೊಳ್ಳಬೇಡ" ಎಂದು ಹೇಳಿದಳು.

"ಇಲ್ಲ ಅಮ್ಮಾ! ನನಗೆ ರೂಪಾಯಿ ಬೇಡ. ನಾನು ಹೇಳುವ ಮಾತನ್ನು ಕೇಳುವೆಯಾ? ಹೇಳು!"

ತಾಯಿಯು ಆಶ್ಚರ್ಯವನ್ನು ಪ್ರಕಟಿಸುತ್ತ "ರೂಪಾಯಿ ಬೇಡವೇ? ಹಾಗಾದರೆ ಅದೇನು ಮಾತು? ಹೇಳು" ಎಂದಳು.

ಲಲಿತ ತಾಯಿಯ ಅತ್ಯಂತ ಸಮೀಪಕ್ಕೆ ಸರಿದು ಬಂದು "ಅಮ್ಮಾ! ಸ್ವಲ್ಪ ಕೃಷ್ಣನನ್ನು ಬರಗೊಡುವೆಯಾ? ಕೊಠಡಿಯೊಳಕ್ಕೆ ಬರುವುದಿಲ್ಲ, ಹೊರಗಿನಿಂದಲೇ ಒಂದು ಸಲ ನಿನ್ನನ್ನು ನೋಡಿಕೊಂಡು ಹೊರಟು ಹೋಗುವನು. ಅವನು ನಿನ್ನೆಯೂ ಬಂದು ಹೊರಗೆ ಕುಳಿತಿದ್ದ. ಈ ದಿವಸವೂ ಕುಳಿತಿರುವನು" ಎಂದು ಹೇಳಿದ.

ಹೇಮಾಂಗಿನಿ ಚಕಿತಳಾಗಿ ಎದ್ದು ಕುಳಿತು. "ಹೋಗು ಲಲಿತ! ಹೋಗು, ಈಗಲೇ ಕರೆದುಕೊಂಡು ಬಾ! ಪಾಪ! ಹೊರಗೆ ಕುಳಿತಿರುವನೇ? ನೀವು ಯಾರೂ ನನಗೆ ಹೇಳಲೇ ಇಲ್ಲವಲ್ಲ?" ಎಂದಳು.

"ಒಳಕ್ಕೆ ಬರಲು ಹೆದರುವನು ಅಮ್ಮಾ!" ಎಂದು ಹೇಳಿ ಲಲಿತ ಅಲ್ಲಿಂದ ಹೊರಟುಹೋದ. ಒಂದೆರಡು ನಿಮಿಷಗಳಲ್ಲೇ ಕೃಷ್ಣ ಕೊಠಡಿಯನ್ನು ಪ್ರವೇಶಿಸಿದ. ತಲೆ ತಗ್ಗಿಸಿಕೊಂಡು ಗೋಡೆಗೊರಗಿ ಸುಮ್ಮನೆ ನಿಂತುಕೊಂಡ.

"ಬಾ ಕೃಷ್ಣ! ಬಾ" ಎಂದಳು ಹೇಮಾಂಗಿನಿ.

ಕೃಷ್ಣ ಹಾಗೆಯೇ ಮೌನದಿಂದ ನಿಂತಿದ್ದ. ಅದನ್ನು ಕಂಡು ಹೇಮಾಂಗಿನಿಯು ತಾನೇ ಎದ್ದು ಬಂದು ಕೃಷ್ಣನನ್ನು ಕೈ ಹಿಡಿದು ಹಾಸಿಗೆಯ ಮೇಲೆ ಕುಳ್ಳಿರಿಸಿಕೊಂಡಳು. ಬಳಿಕ ಅವನ ಬೆನ್ನನ್ನು ಪ್ರೀತಿಯಿಂದ ಸವರುತ್ತ "ಕೃಷ್ಣ!

ಆ ದಿವಸ ಸುಮ್ಮನೆ ಒಂದೆರಡು ಮಾತುಗಳನ್ನಾಡಿದ್ದಕ್ಕಾಗಿ ನಿನ್ನ ಚಿಕ್ಕಕ್ಕನನ್ನು ಮರೆತುಬಿಟ್ಟೆಯಾ?" ಎಂದು ಕೇಳಿದಳು.

ಕೃಷ್ಣ ಬಿಕ್ಕಿ ಬಿಕ್ಕಿ ಅಳತೊಡಗಿದ. ಹೇಮಾಂಗಿನಿಗೆ ಬಹಳ ಆಶ್ಚರ್ಯವಾಗತೊಡಗಿತು. ಇದುವರೆಗೂ ಕೃಷ್ಣ ಅತ್ತುದನ್ನು ಯಾರೂ ನೋಡಿರಲಿಲ್ಲ. ಅನೇಕ ದುಃಖ ಮತ್ತು ಯಾತನೆಗಳು ಬಂದೊದಗಿದರೂ ಅವನು ಕೇವಲ ತಲೆ ತಗ್ಗಿಸಿಕೊಂಡು ಸುಮ್ಮನಿರುವನು. ಯಾರ ಮುಂದೆಯೂ ಅತ್ತವನಲ್ಲ. ಅವನ ಈ ಸ್ವಭಾವ ಹೇಮಾಂಗಿನಿಗೆ ಚೆನ್ನಾಗಿ ಗೊತ್ತಿತ್ತು. ಆದ್ದರಿಂದ ಅವಳು ಬಹಳ ಅಚ್ಚರಿಗೊಂಡು "ಛಿ! ಅಳುವೆ ಏಕೆ? ನಿನ್ನಂತಹ ಜಾಣ ಮಕ್ಕಳು ಅಳುವರೇ?" ಎಂದು ಕೇಳಿದಳು.

ಅವಳ ಈ ಪ್ರಶ್ನೆಗುತ್ತರವಾಗಿ ಕೃಷ್ಣ ಪಂಚೆಯ ತುದಿಯಿಂದ ಬಾಯನ್ನು ಮುಚ್ಚಿಕೊಂಡು, ಉಕ್ಕಿ ಬರುತ್ತಿದ್ದ ಅಳುವನ್ನು ತಡೆಯಲು ಬಹಳವಾಗಿ ಪ್ರಯತ್ನಿಸುತ್ತ "ಎದೆಗೆ ಶೀತವೇರಿ ಹೋಗಿದೆಯೆಂದು ಡಾಕ್ಟರು ಹೇಳಿರುವರಲ್ಲ?" ಎಂದ.

ಹೇಮಾಂಗಿನಿಯು ನಗುತ್ತ "ಛೀ! ಛೀ! ನೀನೆಂತಹ ಹುಡುಗ! ಎಂದಳು.

ಹಾಗೆನ್ನುತ್ತಿರುವಂತೆಯೇ ಹೇಮಾಂಗಿನಿಯ ನೇತ್ರಗಳಿಂದ ಟಪಟಪನೆ ಒಂದೆರಡು ಅಶ್ರುಬಿಂದುಗಳುದುರಿದುವು. ಎಡಗೈಯಿಂದ ಅದನ್ನೊರೆಸಿಕೊಂಡು ಅವನ ತಲೆಯ ಮೇಲೆ ತನ್ನ ಬಲಗೈಯನ್ನಾಡಿಸುತ್ತ "ಎದೆಗೆ ಶೀತ ಏರಿ ಹೋಗಿದೆಯೆಂದು ಡಾಕ್ಟರು ಹೇಳಿದರೇನಾಯಿತು? ಒಂದು ವೇಳೆ ನಾನು ಸತ್ತುಹೋದರೆ ನೀನೂ ಲಲಿತನೂ ಸೇರಿ ನನ್ನನ್ನು ಗಂಗಾನದಿಗೆ ಸೇರಿಸಿ ಬರುವಿರಾ? ಹೇಳು ಕೃಷ್ಣ! ಸೇರಿಸಿ ಬರುವಿರಾ?" ಎಂದು ಕೇಳಿದಳು.

ಅದೇ ಸಮಯಕ್ಕೆ ಸರಿಯಾಗಿ "ಹೇಮು! ಈ ದಿವಸ ದೇಹಸ್ಥಿತಿ ಹೇಗಿದೆ?" ಎನ್ನುತ್ತ ಕಾದಂಬಿನಿಯು ಬಾಗಿಲ ಬಳಿ ಬಂದು ನಿಂತಳು. ಸ್ವಲ್ಪ ಹೊತ್ತು ಕೃಷ್ಣನ ಕಡೆಗೆ ತೀವ್ರ ದೃಷ್ಟಿಯಿಂದ ನೋಡುತ್ತ ನಿಂತಿದ್ದು "ಇಗೋ, ಇವನು ಇಲ್ಲಿ ಬಂದು ನಿಂತಿರುವನು! ಪಾಪ, ಚಿಕ್ಕಕ್ಕನ ಮುಂದೆ ಅತ್ತು-ಕರೆದು

ಪ್ರೀತಿಯನ್ನು ಪಡೆಯುತ್ತಿರುವನು! ಇಷ್ಟಿದ್ದರೂ ಎಂತಹ ಸುಳ್ಳು-ಪೊಳ್ಳು ತೋರಿಕೆಯ ವಿದ್ಯೆಗಳನ್ನು ಕಲಿತಿರುವನು?" ಎಂದಳು.

ಬಹಳ ಆಯಾಸವಾಗಿದ್ದುದರಿಂದ ಹೇಮಾಂಗಿನಿ ಆಗ ತಾನೇ ದಿಂಬಿಗೆ ತಲೆಯೊರಗಿಸಿಕೊಂಡು ಮಲಗಿದ್ದಳು. ಕಾದಂಬಿನಿಯ ಮಾತುಗಳನ್ನು ಕೇಳಿ ದೊಡನೆಯೇ ಅವಳು ಬಾಣದಂತೆ ನೆಟ್ಟಗೆ ಎದ್ದು ಕುಳಿತು "ಅಕ್ಕ! ಈಗ ಆರೇಳು ದಿವಸಗಳಿಂದ ನನಗೆ ಜ್ವರ ಬರುತ್ತಿವೆ. ನಿಮ್ಮ ಕಾಲಿಗೆ ನಮಸ್ಕರಿಸ ವೆನು. ನೀವು ಈಗ ಇಲ್ಲಿಂದ ಹೊರಟುಹೋಗಿ" ಎಂದು ಹೇಳಿದಳು.

ಕಾದಂಬಿನಿಗೆ ಮೊದಲು ಏನೂ ದಿಕ್ಕುತೋರದಂತಾಯಿತು. ಅವಳು ಒಡನೆಯೇ ಸ್ವಲ್ಪ ಚೇತರಿಸಿಕೊಂಡು "ಹೇಮು! ನಾನು ನಿನಗೇನೂ ಹೇಳ ಲಿಲ್ಲ. ನನ್ನ ತಮ್ಮನನ್ನು ಗದರಿಸುತ್ತಿರುವೆನು. ಇದಕ್ಕಾಗಿ ನೀನೇಕೆ ಹೀಗೆ ರೇಗಿ ಬೀಳುವೆ?" ಎಂದಳು.

"ನಿಮ್ಮ ಗದರಿಕೆ-ಬೆದರಿಕೆಗಳು ದಿನ-ರಾತ್ರಿಯೂ ಇದ್ದೇ ಇರುವವು. ಅವೆಲ್ಲಾ ಇಲ್ಲಿ ಬೇಡ. ಮನೆಗೆ ಹೋಗಿ ಬೇಕಾದಷ್ಟು ಗದರಿಸಿರಿ, ನನ್ನೆದುರಿಗೆ ಏನೂ ಬೇಡ" ಎಂದಳು ಹೇಮಾಂಗಿನಿ.

"ಏಕೆ? ನನ್ನನ್ನು ಮನೆಯಿಂದ ಓಡಿಸಿಬಿಡುವೆಯೋ ಹೇಗೆ? ಹೇಮಾಂಗಿ ನಿಯು ಕೈ ಜೋಡಿಸಿಕೊಂಡು ವಿನಯದಿಂದ "ಅಕ್ಕಾ! ನನ್ನ ದೇಹಸ್ಥಿತಿ ಸ್ವಲ್ಪವೂ ಚೆನ್ನಾಗಿಲ್ಲ. ನಿಮ್ಮ ಕಾಲಿಗೆ ನಮಸ್ಕಾರ ಮಾಡುವೆನು. ದಯವಿಟ್ಟು ಹೊರಟು ಹೋಗಿ. ಇಲ್ಲದಿದ್ದರೆ ಸುಮ್ಮನಿರಿ" ಎಂದು ಹೇಳಿದಳು.

"ನನ್ನ ತಮ್ಮನನ್ನು ಸಹ ಗದರಿಸಬಾರದೇ?" ಎಂದಳು ಕಾದಂಬಿನಿ.

"ನಿಮ್ಮ ಮನೆಗೆ ಹೋಗಿ ಬೇಕಾದಂತೆ ಮಾಡಿಕೊಳ್ಳಿ. ಇಷ್ಟ ಬಂದಷ್ಟು ಗದರಿಸಿ!" ಎಂದಳು ಹೇಮಾಂಗಿನಿ.

"ಇರಲಿ, ಈ ದಿವಸ ಅವನಿಗೆ ಚೆನ್ನಾಗಿ ಮಾಡಿಯೇ ಮಾಡುವೆನು! ನನ್ನ ಮೇಲೆ ಯಾವ ಯಾವ ಚಾಡಿ ಹೇಳಿಕೊಟ್ಟಿರುವೆ ಎಂಬುದೆಲ್ಲವನ್ನೂ ಈ ದಿವಸ ಅವನ ಬಾಯಿಂದ ಕಕ್ಕಿಸುವೆನು. ನೀಚ! ಎಷ್ಟು ಸುಳ್ಳು ಹೇಳು ವುದು? ಹಸುವಿನ ಕತ್ತಿಗೆ ಕಟ್ಟಲು ಹಗ್ಗವಿಲ್ಲ; ಎಲ್ಲಾದರೂ ಹೋಗಿ ಸದ್ಯಕ್ಕೆ

ಸ್ವಲ್ಪ ಹುರಿಯನ್ನೋ, ಕತ್ತಾಳೆಯ ನಾರನ್ನೋ ತೆಗೆದುಕೊಂಡು ಬಾರೋ ಕೃಷ್ಣ! ಎಂದು ಹೇಳಿದರೆ ಅದಕ್ಕೆ ಈಗ ಆಗುವುದಿಲ್ಲ ಅಕ್ಕ! ದತ್ತ ಬಾಬುಗಳ ಮನೆಯಲ್ಲಿ ಬೊಂಬೆಯ ನಾಟ್ಯವಂತೆ. ನೋಡಿಬರಲು ಹೋಗುವೆನು. ಎಂದು ಹೇಳಿ ಹೊರಟು ಬಂದ. ಪಾಪ! ಇಲ್ಲಿ ನೋಡುತ್ತಿರುವನಲ್ಲವೇ ಬೊಂಬೆಯ ನಾಟ್ಯ!" ಎಂದು ಹೇಳಿ ಧಡಧಡನೆ ಹೆಜ್ಜೆಗಳನ್ನಿಡುತ್ತ ಅಲ್ಲಿಂದ ಹೊರಟು ಹೋದಳು.

ಹೇಮಾಂಗಿನಿ ಸ್ವಲ್ಪ ಸ್ತಬ್ಧಳಾಗಿ ನಿಂತಿದ್ದಳು. ನಂತರ ಹಾಗೆಯೇ ಮಲಗಿಕೊಂಡು ಅವಳು "ಕೃಷ್ಣ! ನೀನು ಬೊಂಬೆಯ ನಾಟ್ಯವನ್ನು ನೋಡಲು ಏಕೆ ಹೋಗಲಿಲ್ಲ? ಹೊರಟುಹೋಗಿದ್ದರೆ ಎಷ್ಟು ಚನ್ನಾಗಿರುತ್ತಿತ್ತು? ಈ ಮಾತುಗಳೆಲ್ಲಾ ನಡೆಯಲು ಆಸ್ಪದವೇ ಇರುತ್ತಿರಲಿಲ್ಲ ಕೃಷ್ಣ! ಅವರು ನಿನ್ನನ್ನು ಇಲ್ಲಿಗೆ ಬರಗೊಡುವುದಿಲ್ಲವೆಂದು ತಿಳಿದೂ ತಿಳಿದೂ ಏಕೆ ಬರುವೆಯಪ್ಪ? ಬೇಡ, ಇನ್ನು ಮೇಲೆ ಇಲ್ಲಿಗೆ ಬರಬೇಡ." ಎಂದಳು.

ಕೃಷ್ಣ ಏನೂ ಹೇಳದೆ ಸುಮ್ಮನೆ ಹೊರಟುಹೋದ. ಆದರೆ ಸ್ವಲ್ಪ ಹೊತ್ತಿನಲ್ಲಿಯೇ ಹಿಂತಿರುಗಿ ಬಂದು "ಚಿಕ್ಕಕ್ಕ! ನಮ್ಮೂರಿನ ವಿಶಾಲಾಕ್ಷಿ ದೇವಿಯ ಸತ್ಯವು ಮಹತ್ಪ್ರಸಿದ್ಧವಾದುದು. ಅವಳ ಪೂಜೆ ಮಾಡಿಸುವುದರಿಂದ ರೋಗ ಕಾಯಿಲೆಗಳೇನಿದ್ದರೂ ಗುಣವಾಗುವುವು. ಒಂದು ಸಲ ಆಕೆಯ ಪೂಜೆ ಮಾಡಿಸು ಚಿಕ್ಕಕ್ಕ!"

ಈಗ ತಾನೇ ವ್ಯರ್ಥವಾಗಿ ಜಗಳವಾದುದಕ್ಕಾಗಿ ಹೇಮಾಂಗಿನಿಯ ಮನಸ್ಸಿಗೆ ಬಹಳ ಬೇಸರವೆನಿಸಿತ್ತು. ಜಗಳವೇನೋ ಪ್ರತಿನಿತ್ಯವೂ ಆಗುತ್ತಲೇ ಇರುವುದು—ಅದಕ್ಕಾಗಿ ಬೇಸರವಲ್ಲ. ಈ ದಿವಸ ಕಾದಂಬಿನಿಗೆ ಒಂದು ಒಳ್ಳೆಯ ನೆಪ ಸಿಕ್ಕಿದುದರಿಂದ ಈ ನಿರ್ಭಾಗ್ಯ ಹುಡುಗನ ಗತಿ ಏನಾಗುವುದೋ ಎಂಬ ಚಿಂತೆಯಿಂದ ಅವಳ ಮನವು ವ್ಯಾಕುಲಗೊಂಡಿತ್ತು. ಕೃಷ್ಣ ಪುನಃ ಬಂದಾಗ ಅವಳು ಎದ್ದು ನಿಂತಳು. ಅವನನ್ನು ಬಳಿಯಲ್ಲಿ ಕುಳ್ಳಿರಿಸಿಕೊಂಡು ಪ್ರೀತಿಯಿಂದ ಅವನ ಬೆನ್ನ ಮೇಲೆ ಕೈಯಾಡಿಸುತ್ತ ಕಣ್ಣೀರು ಹರಿಸತೊಡಗಿದಳು. ನಂತರ ಕಣ್ಣೊರೆಸಿಕೊಳ್ಳುತ್ತ "ಕೃಷ್ಣ! ನನಗೆ ವಾಸಿಯಾದ ನಂತರ

ಯಾರಿಗೂ ಕಾಣದಂತೆ ನಿನ್ನನ್ನೇ ಪೂಜೆಮಾಡಿಸಿಕೊಂಡು ಬರಲು ಕಳುಹಿಸುವೆನು. ಒಬ್ಬನೇ ಹೋಗಿ ಬರುವೆಯಾ ?" ಎಂದು ಕೇಳಿದಳು.

ಕೃಷ್ಣ ಬಹಳ ಉತ್ಸಾಹದಿಂದ "ಅತ್ಯಾನಂದದಿಂದ ಹೋಗಿಬರುವೆನು ಚಿಕ್ಕಕ್ಕ! ನೀನು ಈ ದಿವಸವೇ ನನ್ನ ಕೈಲಿ ೧ ಒಂದು ರೂಪಾಯಿ ಕೊಟ್ಟು ಪೂಜೆ ಮಾಡಿಸಿಕೊಂಡು ಬರಲು ಕಳುಹಿಸು. ನಾಳೆ ಬೆಳಿಗ್ಗೆಯೇ ಪೂಜೆ ಮಾಡಿಸಿಕೊಂಡು ನಿನಗೆ ಪ್ರಸಾದ ತಂದುಕೊಡುವೆನು. ಅದನ್ನು ತಿಂದೊಡನೆಯೇ ನಿನ್ನ ರೋಗ ಕಾಯಿಲೆಗಳೆಲ್ಲ ದೂರವಾಗುವುವು. ನನ್ನನ್ನು ಈವೊತ್ತೇ ಕಳುಹಿಸಿಕೊಡು ಚಿಕ್ಕಕ್ಕ!" ಎಂದು ಹೇಳಿದ.

ಅವನ ಈ ಅಪಾರ ಉತ್ಸಾಹವನ್ನು ಕಂಡು ಹೇಮಾಂಗಿನಿಯು ಇನ್ನು ಅವನನ್ನು ತಡೆಯುವುದು ಕಷ್ಟವೆಂದರಿತು "ಆದರೆ ಕೃಷ್ಣ! ನಾಳೆ ನೀನು ಹಿಂತಿರುಗಿದ ಬಳಿಕ ಎಲ್ಲರೂ ನಿನ್ನನ್ನು ಬಹಳವಾಗಿ ಹೊಡೆಯುವರು." ಎಂದಳು.

ಏಟೆಂಬ ಮಾತನ್ನು ಕೇಳಿ ಕೃಷ್ಣ ಮೊದಲು ಸ್ವಲ್ಪ ಹೆದರಿದ. ಆದರೆ ಪುನಃ ಪ್ರಫುಲ್ಲಿತ ವದನನಾಗಿ "ಹೊಡೆಯಲಿ, ಅದಕ್ಕೇನು? ಚಿಕ್ಕಕ್ಕ! ನಿನ್ನ ರೋಗ ವಾಸಿಯಾದರೆ ಸರಿ!" ಎಂದು ಹೇಳಿದ.

ಪುನಃ ಹೇಮಾಂಗಿನಿಯ ನೇತ್ರಗಳು ಅಶ್ರುಪೂರಿತವಾದುವು. ಅವಳು "ಕೃಷ್ಣ! ನಾನು-ನಿನಗೆಲ್ಲಿಯವಳು? ಅಷ್ಟಾದರೂ ನನ್ನ ವಿಚಾರವಾಗಿ ನಿನಗೆ ಇಷ್ಟೇಕೆ ಚಿಂತೆ?" ಎಂದು ಕೇಳಿದಳು.

ಈ ಪ್ರಶ್ನೆಗೆ ಉತ್ತರ ಕೃಷ್ಣನಿಗೆಲ್ಲಿಂದ ದೊರಕಬೇಕು? ತನ್ನ ಪೀಡಿತ ಮತ್ತು ಆರ್ತ ಹೃದಯವು ಹಗಲೂ ರಾತ್ರಿಯೂ ತನ್ನ ಮಾತೆಯನ್ನೇ ಹುಡುಕುತ್ತ ತಿರುಗುತ್ತಿರುವುದೆಂದು ಅವನು ಅವಳಿಗೆ ತಿಳಿಸುವುದಾದರೂ ಹೇಗೆ? ಸ್ವಲ್ಪ ಹೊತ್ತಿನ ವರೆಗೆ ಅವಳ ಮುಖವನ್ನೇ ನೋಡುತ್ತ ನಿಂತಿದ್ದು ನಂತರ ಅವನು "ಎದೆಗೆ ಶೀತವೇರಿಹೋಗಿದೆಯೆಂದು ಡಾಕ್ಟರು ಹೇಳಲಿಲ್ಲವೇ ಚಿಕ್ಕಕ್ಕ? ಆದ್ದರಿಂದ ಒಂದು ವೇಳೆ ನಿನ್ನ ಕಾಯಿಲೆ ವಾಸಿಯಾಗದೆ ಇದ್ದರೆ?" ಎಂದು ಕೇಳಿದ.

"ನನ್ನ ಎದೆಗೆ ಶೀತವೇರಿ ಹೋಗಿದ್ದರೆ, ಅದರಿಂದ ನಿನಗೇನಾಯಿತು ಕೃಷ್ಣ? ನಿನಗಿಷ್ಟು ಚಿಂತೆಯೇಕೆ?" ಎಂದು ಕೇಳಿದಳು ಹೇಮಾಂಗಿನಿ ನಗುತ್ತ.

ಕೃಷ್ಣ ಚಕಿತನಾಗಿ "ಚಿಂತೆಯಾಗುವುದಿಲ್ಲವೇ ಚಿಕ್ಕಕ್ಕ? ಎದೆಗೆ ಶೀತ ವೇರುವುದು ಬಹಳ ಕೆಟ್ಟುದು. ಒಂದು ವೇಳೆ ಕಾಯಿಲೆ ಹೆಚ್ಚಿ ಹೋದರೆ?" ಎಂದು ಕೇಳಿದ

"ಆಗ ನಿನಗೆ ಹೇಳಿಕಳುಹಿಸುವೆನು. ಆದರೆ ಕೃಷ್ಣ! ನಾನು ಹೇಳಿ ಕಳುಹಿಸದೆ ಮಾತ್ರ ನೀನು ಬರಬೇಡ!"

"ಏಕೆ ಚಿಕ್ಕಕ್ಕ!"

ಹೇಮಾಂಗಿನಿಯು ದೃಢಪೂರ್ವಕವಾಗಿ ತಲೆಯಲ್ಲಾಡಿಸಿ "ಇಲ್ಲ, ಇನ್ನು ಮೇಲೆ ನಾನು ನಿನ್ನನ್ನು ಇಲ್ಲಿಗೆ ಬರಗೊಡುವುದಿಲ್ಲ. ಕೃಷ್ಣ, ನಾನು ಹೇಳಿಕಳುಹಿಸದೆ ನೀನು ಇಲ್ಲಿಗೆ ಬಂದೆಯಾದರೆ ನನಗೆ ಕೋಪ ಬರುವುದು!" ಎಂದು ಹೇಳಿದಳು.

ಕೃಷ್ಣ ಅವಳ ಮುಖದ ಕಡೆಗೆ ನೋಡಿ ಹೆದರುತ್ತ ಹೆದರುತ್ತ "ಹಾಗಾದರೆ ನಾಳೆ ಬೆಳಿಗ್ಗೆ ಎಷ್ಟು ಹೊತ್ತಿಗೆ ಹೇಳಿ ಕಳುಹಿಸುವೆ?" ಎಂದು ಕೇಳಿದ.

"ನಾಳೆ ಬೆಳಿಗ್ಗೆಯೇ ಬರಬೇಕೇ ಕೃಷ್ಣ!"

ಕೃಷ್ಣ ಅಪ್ರತಿಭನಾಗಿ "ಹಾಗೇನೂ ಇಲ್ಲ ಚಿಕ್ಕಕ್ಕ! ಬೆಳಿಗ್ಗೆ ಇಲ್ಲದಿದ್ದರೆ ಮಧ್ಯಾಹ್ನ ಬರುವೆನು. ಆಗಬಹುದೇ?" ಎಂದು ಕೇಳಿದ.

ಆ ಸಮಯದ ಅವನ ಮುಖ ಮತ್ತು ಕಣ್ಣುಗಳಲ್ಲಿನ ವ್ಯಾಕುಲತೆ ತುಂಬಿದ ಅನುನಯವನ್ನು ಕಂಡು ಹೇಮಾಂಗಿನಿಯ ಮನಸ್ಸಿಗೆ ಬಹಳ ದುಃಖ ವಾಯಿತು. ಆದರೆ ಈಗ ಅವಳು ಮನಸ್ಸನ್ನು ಕಠೋರ ಮಾಡಿದ ಹೊರತು ಕೆಲಸ ನಡೆಯುವಂತಿರಲಿಲ್ಲ. ಎಲ್ಲರೂ ಸೇರಿ ಈ ಏನೂ ಅರಿಯದ, ಅಸಹಾಯ ಬಾಲಕನಿಗೆ ಕೊಡುತ್ತಿರುವ ಯಾತನೆಯನ್ನು ಮತ್ತಷ್ಟು ಹೆಚ್ಚಿಸುವುದರಿಂದಲೂ ಕೆಲಸ ನಡೆಯುವಂತಿರಲಿಲ್ಲ. ಈ ಎಲ್ಲ ಕಷ್ಟಗಳನ್ನೂ ಅವನೇನೋ ಸಹಿಸ

ಬಹುದು, ಆದರೆ ಚಿಕ್ಕಕ್ಕನ ಬಳಿಗೆ ಬಂದುಹೋಗದೆ ಇರುವುದು ಅವನಿಂದ ಸಾಧ್ಯವಾಗದು. ಅದಕ್ಕಾಗಿ ಅವನಿಗೆ ಯಾವ ದಂಡವನ್ನು ವಿಧಿಸಿದರೂ ಅನು ಭವಿಸಲು ಸಿದ್ಧನಾಗಿದ್ದ. ಇತ್ತ ಹೇಮಾಂಗಿನಿಯಾದರೂ ಹೇಗೆ ಸಹಿಸುವಳು ಪಾಪ!

ಅವಳ ಕಣ್ಣುಗಳಿಂದ ಪುನಃ ಧಾರಾಕಾರವಾಗಿ ನೀರು ಹರಿಯತೊಡ ಗಿತು. ಆದರೂ ಅವಳು ಮುಖ ತಿರುಗಿಸಿಕೊಂಡು ಶುಷ್ಕ ಕಂಠದಿಂದ "ನನಗೆ ಬೇಜಾರುಪಡಿಸಬೇಡ ಕೃಷ್ಣ! ಹೊರಟುಹೋಗು ಇಲ್ಲಿಂದ! ನಾನು ಕರೆಯು ಕಳುಹಿಸಿದಾಗ ಬಾ, ಇಲ್ಲದಿದ್ದರೆ ಆಗಾಗ್ಗೆ ಬಂದು ನನ್ನನ್ನು ಬೇಸರಗೊಳಿಸ ಬೇಡ!" ಎಂದು ಹೇಳಿದಳು.

"ಇಲ್ಲ, ನಾನು ಬೇಸರಗೊಳಿಸುವುದಿಲ್ಲ. ಚಿಕ್ಕಕ್ಕ!" ಎಂದು ಹೇಳಿ ತನ್ನ ಭೀತ ಮತ್ತು ಲಜ್ಜಿತ ಮುಖವನ್ನು ತಗ್ಗಿಸಿಕೊಂಡು ಸಣ್ಣನೆ ಅಲ್ಲಿಂದ ಹೊರಟುಹೋದ.

ಈಗಂತೂ ಹೇಮಾಂಗಿನಿಗೆ ತನ್ನ ಕಣ್ಣೀರು ಪ್ರವಾಹವನ್ನು ತಡೆಯು ವುದೇ ಅಸಾಧ್ಯವಾಯಿತು. ಈ ನಿರುಪಾಯ, ಅನಾಥ ಬಾಲಕನು ಮಾತೆ ಯನ್ನು ಕಳೆದುಕೊಂಡು ಈಗ ತನ್ನನ್ನೇ ಮಾತೆಯೆಂದು ಭಾವಿಸಿರುವನೆಂದು ಈ ದಿವಸ ಅವಳಿಗೆ ಸ್ಪಷ್ಟವಾಗಿ ತಿಳಿಯಿತು. ತನ್ನ ಪ್ರೀತ್ಯಾದರಗಳನ್ನು ಪಡೆಯಲು ಈ ದೀನಬಾಲಕನು ಎಷ್ಟು ಪ್ರಯತ್ನಿಸುತ್ತಿರುವನೆಂಬುದರ ಅರಿವು ಈಗ ಅವಳಿಗಾಯಿತು!

ಹೇಮಾಂಗಿನಿಯು ಉಕ್ಕಿಬರುತ್ತಿದ್ದ ಕಣ್ಣೀರನ್ನೊರೆಸಿಕೊಳ್ಳುತ್ತ ಮನಸ್ಸಿ ನಲ್ಲೇ ಈ ರೀತಿ ಎಂದುಕೊಂಡಳು—"ಕೃಷ್ಣ! ನೀನೇನೋ ಇಲ್ಲಿಂದ ನಿರಾಶ ಹೃದಯನಾಗಿ ತಲೆತಗ್ಗಿಸಿಕೊಂಡು ಸುಮ್ಮನೆ ಹೊರಟುಹೋದೆ. ಆದರೆ ನಿನ್ನ ಈ ಚಿಕ್ಕಕ್ಕನು ನಿನಗಿಂತ ನಿರುಪಾಯಳು—ವಿವಶಳು ಎಂಬುದರ ಅರಿವು ನಿನಗಿಲ್ಲ ತಮ್ಮಾ! ಅಧಿಕಾರ ಪೂರ್ವಕವಾಗಿ ನಿನ್ನನು ಒಂದಾವರ್ತಿ ಬಾಚಿ ಅಪ್ಪಿ ಕೊಳ್ಳುವ ಯೋಗ್ಯತೆ ಸಹ ನಿನ್ನ ಈ ಚಿಕ್ಕಕ್ಕನಿಗಿಲ್ಲ ಕೃಷ್ಣ!" ಎಂದು.

ಅಷ್ಟರಲ್ಲಿ ಉಮಾ ಬಂದು "ಅಮ್ಮಾ! ನಿನ್ನೆಯ ದಿನ ಕೃಷ್ಣ ಮಾವ ಬಾಕಿ ವಸೂಲಿಗೆ ಹೋಗದೆ ಇಲ್ಲಿ ಬಂದು ಕುಳಿತುಬಿಟ್ಟಿದ್ದನೆಂದು ದೊಡ್ಡಪ್ಪ ಅವನನ್ನು ಹೇಗೆ ಹೊಡೆದರು ಗೊತ್ತೇ? ಮೂಗಿನಲ್ಲಿ"...............ಎಂದಳು.

ಹೇಮಾಂಗಿನಿಯು ಅವಳನ್ನು ಗದರಿಸುತ್ತ "ಸರಿ, ಸರಿ. ಸಾಕು ಸುಮ್ಮನಿರು! ನೀನು ಇಲ್ಲಿಂದ ನಡೆ!" ಎಂದಳು.

ಇದ್ದಕ್ಕಿದ್ದಂತೆ ತಾಯಿ ಈ ರೀತಿ ಗದರಿಸಿದ್ದನ್ನು ಕಂಡು ಉಮಾ ಬೆಚ್ಚಿದಳು. ಅವಳು ಮತ್ತೇನೂ ಮಾತನಾಡದೆ ಸುಮ್ಮನೆ ಅಲ್ಲಿಂದ ಹೊರಟು ಹೋಗುವುದರಲ್ಲಿದ್ದಳು. ಅಷ್ಟರಲ್ಲಿ ಹೇಮಾಂಗಿನಿಯು "ಬಾ ಇಲ್ಲಿ, ಮೂಗಿನಲ್ಲಿ ಬಹಳ ರಕ್ತ ಬಂದಿತೇ?" ಎಂದು ಕೇಳಿದಳು.

ಉಮಾ ಹಿಂತಿರುಗಿ "ಇಲ್ಲ, ಬಹಳ ರಕ್ತ ಬರಲಿಲ್ಲ, ಸ್ವಲ್ಪವೇ ಬಂತು" ಎಂದಳು.

"ಸರಿ. ನೀನು ಹೋಗು!"

ಬಾಗಿಲ ಬಳಿ ಹೋದ ಕೂಡಲೇ ಉಮಾ ಹಿಂತಿರುಗಿ ಬಂದು "ಅಮ್ಮಾ! ಇದೋ ನೋಡು, ಕೃಷ್ಣ ಮಾವ ಇಲ್ಲೇ ನಿಂತಿರುವನು!" ಎಂದಳು.

ಅವಳ ಈ ಮಾತನ್ನು ತನ್ನ ಸ್ವಾಗತವೆಂದರಿತು, ಕೃಷ್ಣ ಸ್ವಲ್ಪ ಮುಂದೆ ಬಂದು ಸಲಜ್ಜಭಾವದಿಂದ ನಗುತ್ತ "ಚಿಕ್ಕಕ್ಕ! ದೇಹಸ್ಥಿತಿ ಹೇಗಿದೆ?" ಎಂದು ಕೇಳಿದ.

ಕ್ರೋಧ, ದುಃಖ ಮತ್ತು ಅಭಿಮಾನಗಳಿಂದ ಹೇಮಾಂಗಿನಿಗೆ ಏನೂ ತೋರದಾಯಿತು. ಅವಳು ಹುಚ್ಚಿಯಂತೆ ಗಟ್ಟಿಯಾಗಿ ಅರಚುತ್ತ "ಇಲ್ಲಿಗೇತಕ್ಕೆ ಬಂದೆ? ಏನು ಮಾಡಲು ಇಲ್ಲಿಗೆ ಬಂದೆ? ಹೋಗು, ಈ ಕ್ಷಣ ಇಲ್ಲಿಂದ ಹೊರಟುಹೋಗು. ಹೇಳುತ್ತಿರುವೆನು ಹೋಗೆಂದು........" ಎಂದು ಗದರಿಸಿದಳು.

ಕೃಷ್ಣ ದಿಙ್ಮೂಢನಾಗಿ ಸುಮ್ಮನೆ ನೋಡುತ್ತ ನಿಂತುಬಿಟ್ಟ. ಹೇಮಾಂಗಿನಿಯು ಮತ್ತಷ್ಟು ತೀವ್ರ ಸ್ವರದಿಂದ "ಕತ್ತೆ! ಅಷ್ಟು ಹೇಳಿದರೂ ನಿಂತಿರುವೆಯಾ? ನಡೆ ಇಲ್ಲಿಂದ?" ಎಂದು ಗದರಿಸಿದಳುಪುನಃ.

ಕೃಷ್ಣ ತಲೆತಗ್ಗಿಸಿ, "ಹೋಗುವೆನು" ಎಂದಿಷ್ಟು ಮಾತ್ರ ಹೇಳಿ ಅಲ್ಲಿಂದ ಹೊರಟುಹೋದ. ಅವನು ಹೋದನಂತರ ಹೇಮಾಂಗಿನಿಯು ನಿರ್ಜೀವಳಂತೆ ಹಾಸಿಗೆಯ ಮೇಲೆ ಬಂದು ಬಿದ್ದುಕೊಂಡು ಅಸ್ಫುಟ ಸ್ವರದಿಂದ "ಕತ್ತಿ! ನೂರು ಸಲ ಹೇಳಿರುವೆನು ಇಲ್ಲಿಗೆ ಬರಬೇಡವೆಂದು? ಅಷ್ಟಾದರೂ ಪುನಃ ಪುನಃ ಚಿಕ್ಕಕ್ಕನಂತೆ-ಚಿಕ್ಕಕ್ಕ! ಉಮಾ, ಇನ್ನು ಮೇಲೆ ಅವನನ್ನು ಮನೆಯೊಳಕ್ಕೆ ಸೇರಿಸಬೇಡವೆಂದು ಶಿವನಿಗೆ ತಿಳಿಸು!" ಎಂದಳು.

ಉಮಾ ಏನೂ ಉತ್ತರ ಕೊಡಲಿಲ್ಲ. ಸುಮ್ಮನೆ ಹೊರಗೆ ಹೊರಟುಹೋದಳು. ರಾತ್ರಿ ಹೇಮಾಂಗಿನಿಯು ಪತಿಯನ್ನು ಬಳಿಗೆ ಕರೆದು, ಗದ್ಗದ ಸ್ವರದಿಂದ ಅವನೊಡನೆ "ಇದುವರೆಗೂ ನಾನು ನಿಮ್ಮನ್ನು ಎಂದೂ ಏನೂ ಕೇಳಿದವಳಲ್ಲ. ಈಗ–ನನ್ನ ಈ ಕಾಯಿಲೆಯ ಸಮಯದಲ್ಲಿ–ನಿಮ್ಮಲ್ಲಿ ಒಂದು ಭಿಕ್ಷೆ ಬೇಡುವೆನು. ನೀಡುವಿರಾ?" ಎಂದು ಕೇಳಿದಳು.

ವಿಪಿನನು ಸಂದಿಗ್ಧ ಸ್ವರದಿಂದ "ಅದೇನು ಹೇಳು!" ಎಂದ.

"ಕೃಷ್ಣನನ್ನು ನನಗೆ ಕೊಟ್ಟು ಬಿಡಿ. ಪಾಪ, ಆ ಬಾಲಕನ ದುಃಖವನ್ನು ನೋಡಲಾಗುವುದಿಲ್ಲ. ತಾಯಿ ತಂದೆಯಿಲ್ಲದ ಆ ಪರದೇಶಿ ಬಾಲಕನನ್ನು ಅವರು ಹೊಡೆದು ಹೊಡೆದು ಕೊಂದುಹಾಕಿ ಬಿಡುವರು. ಇದನ್ನು ನಾನು ಕಣ್ಣಾರೆ ನೋಡಲಾರೆ" ಎಂದಳು ಹೇಮಾಂಗಿನಿ.

ವಿಪಿನ ಮುಗುಳು ನಗೆ ನಗುತ್ತ "ಹಾಗಾದರೆ ಕಣ್ಣು ಮುಚ್ಚಿಕೊಂಡು ಬಿಡು, ಯಾವ ಕಂಟಿಯೂ ಇರುವುದಿಲ್ಲ, ಯಾವ ಜಗಳವೂ ಇರುವುದಿಲ್ಲ." ಎಂದ.

ಪತಿಯ ಈ ನಿಷ್ಠುರ ಪರಿಹಾಸ್ಯವು ತೀಕ್ಷ್ಣವಾದ ಬಾಣದಂತೆ ಹೇಮಾಂಗಿನಿಯ ಹೃದಯವನ್ನು ಇರಿಯತೊಡಗಿತು. ಇಂತಹ ಇರಿತವನ್ನು ಅವಳೆಂದೂ ಸಹಿಸಿದವಳಲ್ಲ. ಆದರೆ ಈ ದಿವಸ ದುಃಖಾತಿರೇಕದಿಂದ ಅವಳ ಪ್ರಾಣವೇ ಹೋಗುವಂತಿತ್ತು. ಆದಕಾರಣ ಅವಳು ಎಲ್ಲವನ್ನೂ ಸಹಿಸಿಕೊಂಡು ಕೈಜೋಡಿಸಿ ವಿನಯದಿಂದ "ನಿಮ್ಮಾಣೆಗೂ ಹೇಳುವೆನು—ಅವನು

ನನಗೆ ಹೊಟ್ಟೆಯಲ್ಲಿ ಹುಟ್ಟಿ'' ಮಗನಿಗಿಂತಲೂ ಹೆಚ್ಚು. ಅವನನ್ನು ನನಗೆ ಕೊಟ್ಟುಬಿಡಿ! ಅವನನ್ನು ಸಾಕಿ-ಸಲಹಿ, ಉಡಿಸಿ-ಉಣಿಸಿ ದೊಡ್ಡವನನ್ನಾಗಿ ಮಾಡುವೆನು. ನಂತರ ನಿಮ್ಮ ಇಷ್ಟ ಬಂದಂತೆ ಮಾಡಿ. ಅವನು ದೊಡ್ಡವನಾದ ಬಳಿಕ ನಾನೇನೂ ಹೇಳುವುದಿಲ್ಲ. ಯಾವ ತಂಟೆಗೂ ಬರುವುದಿಲ್ಲ!" ಎಂದು ಹೇಳಿದಳು.

ವಿಪಿನ ಸ್ವಲ್ಪ ಮೇಲು ಧ್ವನಿಯಿಂದ "ಅವನೇನು ನಮ್ಮ ಅಂಗಡಿಯ ಅಕ್ಕಿ ಅಥವಾ ಬೇಳೆಯ ಮೂಟೆಯೇ—ನಿನಗೆ ತಂದು ಕೊಟ್ಟು ಬಿಡುವುದಕ್ಕೆ? ಮತ್ತೊಬ್ಬರ ಮನೆಯ ಹುಡುಗ, ಬೇರೆಯವರ ಮನೆಗೆ ಬಂದಿರುವನು! ನೀನೇಕೆ ಇದಕ್ಕೆಲ್ಲಾ ಕೈಹಾಕಿ ಇಷ್ಟು ದುಃಖ ಪಡುವೆ?" ಎಂದು ಕೇಳಿದ.

ಹೇಮಾಂಗಿನಿಗೆ ದುಃಖವನ್ನು ತಡೆಯಲಾಗಲಿಲ್ಲ. ಅವಳ ಕಣ್ಣಾಲಿಗಳು ನೀರಿನಲ್ಲಿ ತೇಲತೊಡಗಿದುವು. ಸ್ವಲ್ಪ ಹೊತ್ತಿನ ಬಳಿಕ ಕಣ್ಣೊರೆಸಿಕೊಳ್ಳುತ್ತ "ನೀವು ಮನಸ್ಸು ಮಾಡಿದರೆ ಅಣ್ಣ ಮತ್ತು ಅತ್ತಿಗೆಯವರನ್ನು ಕೇಳಿ ಅವನನ್ನು ಕರೆತರಬಹುದು. ನಿಮ್ಮ ಕಾಲಿಗೆ ಬೀಳುವೆನು. ಅವನನ್ನು ನನಗೆ ತಂದು ಕೊಡಿರಿ!" ಎಂದು ವಿನಯದಿಂದ ಕೇಳಿಕೊಂಡಳು.

"ಒಂದು ವೇಳೆ ಹಾಗೆ ಕರೆತರುವೆನೆಂದೂ ಭಾವಿಸೋಣ! ಆದರೂ ಅವನ ಪಾಲನೆ-ಪೋಷಣೆಗೈಯಲು ನಾವೇನು ಅಂತಹ ದೊಡ್ಡ ಮನುಷ್ಯರೇ?" ಎಂದ ವಿಪಿನ.

"ಇದುವರೆಗೂ ನೀವು ನನ್ನ ಸಣ್ಣ—ಪುಟ್ಟ ಮಾತುಗಳನ್ನು ಸಹ ಮೀರುತ್ತಿರಲಿಲ್ಲ. ಈಗ ನಾನು ಮಾಡಿರುವ ಅಪರಾಧವಾದರೂ ಏನು? ಇಷ್ಟು ವಿನಯದಿಂದ ಕೇಳಿಕೊಳ್ಳುತ್ತಿರುವೆನು—ನನ್ನ ಪ್ರಾಣವೇ ಹೋಗುತ್ತಿರುವುದೆಂದು ಹೇಳುತ್ತಿರುವೆನು. ಇಷ್ಟಾದರೂ ನನ್ನ ಈ ಒಂದು ಮಾತನ್ನು ಕೇಳಲಾಗುವುದಿಲ್ಲವೇ? ಆ ನಿರ್ಭಾಗ್ಯ ಬಾಲಕನನ್ನು ಎಲ್ಲರೂ ಸೇರಿ ಕೊಂದು ಹಾಕಿ ಬಿಡುವರಲ್ಲ! ಅಯ್ಯೋ........! ಆಗಲಿ ನಾನು ಅವನನ್ನು ಇಲ್ಲಿಗೆ ಕರೆಸಿಕೊಳ್ಳುವೆನು. ಯಾರೇನುಹೇಳುವರೋ ನೋಡುವೆನು!" ಎಂದಳು **ಹೇಮಾಂಗಿನಿ.**

ವಿಪಿನನು ಕ್ರೋಧಿತಕಂಠದಿಂದ "ಆತನನ್ನು ಸಾಕಿ-ಸಲಹುವುದು ನನ್ನಿಂದ ಸಾಧ್ಯವಿಲ್ಲ!" ಎಂದು ಹೇಳಿದ.

"ನಾನು ಸಾಕಿ–ಸಲಹುವೆನು! ನನ್ನ ಹುಡುಗನಿಗೆ ಉಡಿಸಿ–ಉಣಿಸುವಷ್ಟು ಅಧಿಕಾರ ಈ ಮನೆಯಲ್ಲಿ ನನಗಿಲ್ಲವೇ? ನಾಳೆಯೇ ಅವನನ್ನು ಕರೆಯು ಕಳುಹಿಸಿ ನನ್ನ ಬಳಿಯಲ್ಲಿರಿಸಿಕೊಳ್ಳುವೆನು. ಒಂದು ವೇಳೆ ಅಕ್ಕ ಏನಾದರೂ ಜೋರು ಮಾಡಿದರೆ ಅವರನ್ನೇ ಪೋಲೀಸ್ ಠಾಣೆಗೆ ಕಳುಹಿಸಿಬಿಡುವೆನು!" ಎಂದಳು ಹೇಮಾಂಗಿನಿ.

ಪತ್ನಿಯ ಮಾತನ್ನು ಕೇಳಿ ವಿಪಿನ ಕ್ರೋಧ ಮತ್ತು ಅಭಿಮಾನಗಳಿಂದ ಒಂದು ನಿಮಿಷ ಅವಾಕ್ಕಾಗಿ ನಿಂತುಬಿಟ್ಟ. ನಂತರ "ಆಗಲಿ! ಏನಾಗುವುದೊ ನೋಡುವೆನು!" ಎಂದು ಹೇಳಿ ಹೊರಟುಹೋದ.

ಮರುದಿನ ಮುಂಜಾನೆಯಿಂದಲೇ ಮಳೆ ಸುರಿಯತೊಡಗಿತ್ತು. ಹೇಮಾಂಗಿನಿ ತನ್ನ ಕೊಠಡಿಯ ಕಿಟಕಿಯನ್ನು ತೆರೆದು ಆಕಾಶದ ಕಡೆಗೆ ನೋಡುತ್ತಿದ್ದಳು. ಅಕಸ್ಮಾತ್ ಪಾಚು–ಗೋಪಾಲರ ಉಚ್ಚ ಸ್ವರವು ಅವಳ ಕಿವಿಗೆ ಬಿತ್ತು. "ಅಮ್ಮಾ, ಸ್ವಲ್ಪ ನಿನ್ನ ಬುದ್ಧಿವಂತ ತಮ್ಮನನ್ನು ನೋಡು! ಮಳೆಯಲ್ಲಿ ನೆನೆಯುತ್ತ ಬಂದಿರುವನು!" ಎನ್ನುತ್ತಿದ್ದರು.

"ಪರಕೆ ಎಲ್ಲಿದೆಯೋ? ಇದೋ ಈಗಲೇ ಬಂದೆ!" ಎಂದು ಸಿಂಹಿನಿಯಂತೆ ಗರ್ಜಿಸುತ್ತ ತಲೆಯ ಮೇಲೆ ಸೆರಗು ಹಾಕಿಕೊಂಡು ಬಾಗಿಲ ಬಳಿ ಬಂದು ನಿಂತಳು ಕಾದಂಬಿನಿ.

ಹೇಮಾಂಗಿನಿಗೆ ಹೆದರಿಕೆಯಿಂದ ಹೃದಯ ಕಂಪಿಸತೊಡಗಿತು. ಅವಳು ಲಲಿತನನ್ನು ಕರೆದು "ಲಲಿತ, ಸ್ವಲ್ಪ ಆ ಮನೆಗೆ ಹೋಗಿ, ಕೃಷ್ಣ ಮಾವ ಎಲ್ಲಿಂದ ಬರುತ್ತಿರುವನೆಂದು ನೋಡಿಕೊಂಡು ಬಾ!" ಎಂದು ಹೇಳಿದಳು.

ಲಲಿತ ಸರ್ರನೆ ಓಡಿಹೋದ. ಸ್ವಲ್ಪ ಹೊತ್ತಿನಲ್ಲೇ ಹಿಂತಿರುಗಿ ಬಂದು "ಅಮ್ಮಾ! ಪಾಚು ಅಣ್ಣನು ಅವನನ್ನು ಕುರ್ಚಿ ಕುಳ್ಳಿರಿಸಿರುವನು; ಅಲ್ಲದೆ ಅವನ ತಲೆಯ ಮೇಲೆ ಎರಡು ಇಟ್ಟಿಗೆಗಳನ್ನು ಇರಿಸಿರುವನು!" ಎಂದು ಹೇಳಿದ.

ಹೇಮಾಂಗಿನಿಯು ಖಿನ್ನವದನಳಾಗಿ "ಏಕೆ? ಅವನೇನು ಮಾಡಿದ?" ಎಂದು ಕೇಳಿದಳು.

"ನಿನ್ನೆಯ ದಿನ ಮಧ್ಯಾಹ್ನ ಸಾಲುಗಾರರ ಬಳಿ ಬಾಕಿ ವಸೂಲಿಗಾಗಿ ಕಳುಹಿಸಿದರೆ, ಅಲ್ಲಿಂದ ಮೂರುರೂಪಾಯಿಗಳನ್ನು ತೆಗೆದುಕೊಂಡು ಎಲ್ಲಿಗೋ ಹೊರಟುಹೋದ. ಮೂರುರೂಪಾಯನ್ನೂ ಖರ್ಚುಮಾಡಿಕೊಂಡು ಈಗ ತಾನೇ ಮನೆಗೆ ಬಂದಿರುವನು!" ಎಂದು ಹೇಳಿದ ಲಲಿತ.

ಹೇಮಾಂಗಿನಿಗೆ ಈ ಮಾತಿನಲ್ಲಿ ನಂಬಿಕೆಯುಂಟಾಗಲಿಲ್ಲ. ಅವಳು "ಅವನು ರೂಪಾಯಿ ವಸೂಲು ಮಾಡಿಕೊಂಡನೆಂದು ಯಾರು ತಿಳಿಸಿದರು?" ಎಂದು ಕೇಳಿದಳು.

"ಲಕ್ಷ್ಮಣನೇ ಸ್ವತಃ ಬಂದು ಹೇಳಿ ಹೋದ" ಎಂದು ಹೇಳಿ ಲಲಿತ ಪಾಠವನ್ನು ಓದಿಕೊಳ್ಳಲು ಹೊರಟುಹೋದ. ನಂತರ ಎರಡು–ಮೂರು ಗಂಟೆಗಳ ಕಾಲ ಏನೂ ಗಲಾಟೆಯಾಗಲಿಲ್ಲ. ಸುಮಾರು ಹತ್ತು ಗಂಟೆಯ ಹೊತ್ತಿಗೆ ಅಡಿಗೆಯವಳು ರೊಟ್ಟಿಯನ್ನು ತಯಾರಿಸಿ, ಒಂದು ತಟ್ಟೆಯಲ್ಲಿ ಕೆಲವು ರೊಟ್ಟಿಗಳನ್ನು ತಂದು ಹೇಮಾಂಗಿನಿಯ ಮುಂದಿರಿಸಿದಳು. ಹೇಮಾಂಗಿನಿಯು ಎದ್ದು ಕುಳಿತುಕೊಳ್ಳಬೇಕೆಂದಿರುವಷ್ಟರಲ್ಲೇ ಅವಳ ಕೊಠಡಿಯ ಮುಂದೆ ಕುರುಕ್ಷೇತ್ರದ ದೃಶ್ಯವು ಕಾಣಿಸಿತು. ಕಾದಂಬಿನಿಯು ಮುಂದೆ ಮುಂದೆ ಬರುತ್ತಿದ್ದಳು, ಅವಳ ಹಿಂದೆ ಪಾಚು–ಗೋಪಾಲರು ಕೃಷ್ಣನ ಕಿವಿ ಹಿಡಿದು ಎಳೆದುಕೊಂಡು ಬರುತ್ತಿದ್ದರು. ವಿಪಿನನ ಅಣ್ಣ ನವೀನನೂ ಬರುತ್ತಿದ್ದನು. ವಿಪಿನನನ್ನು ಕರೆತರುವುದಕ್ಕಾಗಿ ಅಂಗಡಿಗೆ ಆಳನ್ನು ಕಳುಹಿಸ ಲಾಗಿತ್ತು.

ಹೇಮಾಂಗಿನಿಯು ಗಾಬರಿಯಿಂದ ಎದ್ದು, ತಲೆಯ ಮೇಲೆ ಮುಸುಕು ಹಾಕಿಕೊಂಡು ಒಂದು ಕಡೆಗೆ ನಿಂತುಕೊಂಡಳು. ನವೀನನು ತೀವ್ರಸ್ವರದಿಂದ ಹೇಳಲು ಪ್ರಾರಂಭಿಸಿದ—

"ಬಹೂ! * ನಿನ್ನ ಕಾರಣದಿಂದ ನಾವು ಈ ಮನೆಯಲ್ಲಿರುವುದು ಅಸಾಧ್ಯವೆಂದು ಕಾಣುತ್ತದೆ. ನಮ್ಮ ಮನೆಯನ್ನು ಖರೀದಿ ಕೊಟ್ಟುಬಿಡುವಂತೆ

* ಉತ್ತರ ಹಿಂದುಸ್ಥಾನದ ಕಡೆಯಲ್ಲಿ ಮನೆಯ ಸೊಸೆಯನ್ನು ಎಲ್ಲರೂ "ಬಹೂ" ಎಂದು ಕರೆಯುವ ವಾಡಿಕೆಯುಂಟು.

ವಿಪಿನನಿಗೆ ತಿಳಿಸು—ನಾವು ಮತ್ತೆಲ್ಲಾದರೂ ಹೋಗಿ ಇರುವೆವು" ಎಂದ.

ಹೇಮಾಂಗಿನಿ ಈ ಮಾತನ್ನು ಕೇಳಿ ಆಶ್ಚರ್ಯಚಕಿತಳಾಗಿ ಸುಮ್ಮನೆ ನಿಂತುಬಿಟ್ಟಳು. ಆಗ ಕಾದಂಬಿನಿಯು ಮುಂದೆ ಬಂದು ಮುಖಬಾಯಿಗಳನ್ನು ತಿರುಗಿಸುತ್ತ "ಬಹೂ! ನಾನು ನಿನಗೇನಾಗಬೇಕೆಂದು ಗೊತ್ತೇ? ನಾನು ನಿನ್ನ ಓರಗಿತ್ತಿ! ನನ್ನನ್ನು ನಾಯಿ–ನರಿಯೆಂದು ಭಾವಿಸಿರುವೆಯಾ ಹೇಗೆ? ಸುಳ್ಳು–ಪೊಳ್ಳು, ಬೂಟಾಟಿಕೆಯ ಪ್ರೀತಿಯನ್ನು ತೋರಿಸಿ ನನ್ನ ತಮ್ಮನನ್ನು ಹಾಳುಮಾಡಬೇಡವೆಂದು ನಾನು ನಿನಗೆ ಸಾವಿರ ಸಲ ಹೇಳಲಿಲ್ಲವೇ? ಕಡೆಗೂ ನಾನು ಹೇಳಿದಂತೆಯೇ ಆಯಿತಲ್ಲ! ಏನೋ ಒಂದೆರಡು ದಿವಸದ ಪ್ರೀತಿ–ಅಭಿಮಾನಗಳು ಸಹಜ, ಆದರೆ ಆ ಜನ್ಮವೂ ನೀನು ಅವನನ್ನು ಸಾಕಿ–ಸಲಹಲಾರೆ! ಆ ಕೆಲಸವನ್ನು ಮಾತ್ರ ನಾವೇ ಮಾಡಬೇಕು!" ಎಂದಳು.

ನಿತ್ಯದಂತೆ ಈ ದಿವಸವೂ ಇದೊಂದು ಕಟೂಕ್ತಿಯೆಂದು ತಿಳಿದು, ಹೇಮಾಂಗಿನಿ ಅತ್ಯಂತ ಕೋಮಲ ಸ್ವರದಿಂದ "ಈಗ ಏನಾಯಿತಕ್ಕ?" ಎಂದು ಕೇಳಿದಳು.

ಕಾದಂಬಿನಿಯು ಇನ್ನಷ್ಟು ಹೆಚ್ಚಾಗಿ ಕೈಬಾಯಿಗಳನ್ನು ತಿರುಗಿಸುತ್ತ "ಆಗುವುದೇನು? ಒಳ್ಳೆಯದೇ ಆಯಿತು–ಬಹಳ ಒಳ್ಳೆಯದಾಯಿತು! ನೀನು ಹೇಳಿಕೊಟ್ಟಿದ್ದರಿಂದ ವಸೂಲಿಯ ಹಣವನ್ನು ಕದ್ದುಕೊಂಡು ಹೋಗುವುದನ್ನು ಕಲಿತುಕೊಂಡ, ಪಾಪ! ಇನ್ನೆರಡು ದಿವಸ ಹೀಗೆಯೇ ಹೇಳಿಕೊಟ್ಟರೆ ಪೆಟ್ಟಿಗೆಯ ಬೀಗಒಡೆಯುವುದನ್ನೂ ಕನ್ನಹಾಕುವುದನ್ನೂ ಕಲಿತುಕೊಳ್ಳುವನು! ಎಂದಳು.

ಮೊದಲೇ ಹೇಮಾಂಗಿನಿಗೆ ಮೈಸರಿಯಾಗಿಲ್ಲ; ಅದರ ಮೇಲೆ ಈ ನಿಂದೆ, ಸುಳ್ಳು–ಪೊಳ್ಳು ದೋಷಾರೋಪಣೆ ಬೇರೆ! ಅವಳಿಗೆ ಜ್ಞಾನವೇ ಹೋದಂತಾಯಿತು. ಈ ಮೊದಲು ಭಾವನವರೆದುರಿಗೆ ಯಾವ ವಿಚಾರಕ್ಕೇ ಆಗಲಿ–ಅವಳೆಂದೂ ಏನೂ ಮಾತನಾಡಿದವಳಲ್ಲ. ಆದರೆ ಈ ದಿವಸ ಅವಳಿಗೆ ಸಹಿಸಲಾಗಲಿಲ್ಲ. ಅವಳು ಕೋಮಲ ಸ್ವರದಿಂದ "ಕದಿಯುವುದು–ಕಳ್ಳತನ ಮಾಡುವುದನ್ನು ಅವನಿಗೆ ನಾನು ಹೇಳಿಕೊಟ್ಟೆನೇ ಅಕ್ಕ?" ಎಂದು ಕೇಳಿದಳು.

"ನೀನೇ ಹೇಳಿಕೊಟ್ಟಿಯೊ ಇಲ್ಲವೊ ನನಗೇನು ಗೊತ್ತು? ಆದರೆ ಮೊದಲು ಅವನಲ್ಲಿ ಈ ಸ್ವಭಾವವಿರಲಿಲ್ಲ. ನಿಮ್ಮಿಬ್ಬರಲ್ಲಿ ಗುಟ್ಟುಗುಟ್ಟಾಗಿ ಇಷ್ಟೊಂದು ಮಾತು–ಕತೆ ನಡೆಯುವುದಾದರೂ ಏನು?" ಎಂದಳು ಕಾದಂಬಿನಿ.

ಏನೇ ಇರಲಿ, ಅಂತೂ ಅನೇಕ ದಿನಗಳಿಂದ ಅದುಮಿರಿಸಿದ್ದ ಹಾಗೂ ಕೂಡಿರಿಸಿದ್ದ ವಿದ್ವೇಷವು ಇಂದು ಸ್ವಲ್ಪ ಮಾರ್ಗವನ್ನು ಕಂಡು ಹೊರಕ್ಕೆ ಹರಿಯಿತು.

ಸ್ವಲ್ಪ ಹೊತ್ತಿನವರೆಗೆ ಏನೂ ದಿಕ್ಕುತೋರದವಳಂತೆ ನಿಂತಿದ್ದಳು ಹೇಮಾಂಗಿನಿ. ಒಬ್ಬ ವ್ಯಕ್ತಿಯು ಮತ್ತೊಬ್ಬ ವ್ಯಕ್ತಿಯನ್ನು ಈ ರೀತಿ ನಿಷ್ಠುರ ಆಘಾತ ಹಾಗೂ ನಿರ್ಲಜ್ಜತೆಯಿಂದ ಅಪಮಾನಗೊಳಿಸುವುದು ಸಾಧ್ಯವೇ ಎಂದು ಅವಳು ಯೋಚಿಸತೊಡಗಿದಳು. ಆದರೆ ಆ ಭಾವನೆಯು ಕ್ಷಣ ಮಾತ್ರದ್ದಾಗಿತ್ತು. ಮರುಕ್ಷಣವೇ ಅವಳು ಮರ್ಮಾಹತ ಸಿಂಹಿನಿಯಂತೆ ಹೊರಗೆದ್ದು ಬಂದಳು. ಕ್ರೋಧದಿಂದ ಅವಳ ಕಣ್ಣುಗಳು ಕೆಂಡದಂತೆ ಕೆಂಪಾಗಿದ್ದುವು. ಭಾವನವರು ಎದುರಿಗೆ ನಿಂತಿದ್ದುದನ್ನು ಕಂಡು ತಲೆಯ ಮುಸುಕನ್ನು ಮಾತ್ರ ಸ್ವಲ್ಪ ಮುಂದಕ್ಕೆಳೆದುಕೊಂಡಳು. ಆದರೆ ಕೋಪವನ್ನು ತಡೆಯಲು ಅವಳಿಂದಾಗಲಿಲ್ಲ. ಅವಳು ಕಾದಂಬಿನಿಯನ್ನು ಸಂಬೋಧಿಸಿ ಮೃದು ಹಾಗೂ ಕಠೋರ ಸ್ವರದಿಂದ "ಅಕ್ಕ! ನಿಮ್ಮಂತಹ ಜಗಳಗಂಟರೊಡನೆ ಮಾತನಾಡಲು ಸಹ ನನಗೆ ಅಸಹ್ಯವೆನಿಸುವುದು. ಈ ಹುಡುಗನನ್ನು ನಿಮ್ಮ ತಮ್ಮನೆಂದು ಹೇಳಿಕೊಳ್ಳಲು ನಿಮಗೆ ನಾಚಿಕೆ ಸಹ ಆಗುವುದಿಲ್ಲವೇ? ಮನುಷ್ಯನು ಯಾವುದಾದರೊಂದು ಪ್ರಾಣಿಯನ್ನು ಸಾಕಿದರೆ ಅದಕ್ಕೆ ಸಹ ಹೊಟ್ಟೆತುಂಬ ತಿನ್ನಲು–ಉಣ್ಣಲು ಕೊಡುವನು. ಹೀಗಿರುವಲ್ಲಿ ನೀವು ಈ ನಿರ್ಭಾಗ್ಯ ಬಾಲಕನಿಂದ ಇಷ್ಟೊಂದು ಸಣ್ಣ–ಪುಟ್ಟ ಕೆಲಸಗಳನ್ನು ಮಾಡಿಸಿಕೊಂಡೂ ಇವನಿಗೆ ಹೊಟ್ಟೆತುಂಬ ಅನ್ನ ಹಾಕುವದಿಲ್ಲವಲ್ಲ! ನಾನಿಲ್ಲದಿದ್ದರೆ ಇದುವರೆಗೆ ಇವನು ಉಪವಾಸವಿದ್ದೇ ಸತ್ತುಹೋಗುತ್ತಿದ್ದ! ಅವನು ಕೇವಲ ಹಸಿವೆಯ ತಾಪವನ್ನು ತಡೆಯಲಾರದೆ ನನ್ನ ಬಳಿಗೆ ಓಡಿಬರುವನು—ಪ್ರೀತಿ–ಆದರಗಳನ್ನು ಪಡೆಯುವುದಕ್ಕೋಸ್ಕರವಲ್ಲ" ಎಂದಳು.

"ನಾವು ಅವನಿಗೆ ಹೊಟ್ಟೆತುಂಬ ಅನ್ನ ಸಹ ಹಾಕುವುದಿಲ್ಲ, ಅವನಿಂದ ಕೆಲಸ ಮಾತ್ರ ಮಾಡಿಸಿಕೊಳ್ಳುವೆವು. ಪಾಪ! ನೀನು ಅವನಿಗೆ ಉಣ್ಣಲು-ತಿನ್ನಲು ಕೊಟ್ಟುಕೊಟ್ಟು ಬದುಕಿಸಿದೆಯಲ್ಲವೇ ?" ಎಂದಳು ಕಾದಂಬಿನಿ.

"ಹೌದು, ನಾನು ನಿಜವಾದ ಮಾತನ್ನೇ ಹೇಳುತ್ತಿರುವೆನು. ಇದು ವರೆಗೂ ನೀವು ಒಂದು ದಿವಸವಾದರೂ ಅವನಿಗೆ ಎರಡು ವೇಳೆ ಹೊಟ್ಟೆತುಂಬ ಅನ್ನ ಹಾಕಿರುವಿರಾ? ಅವನನ್ನು ಹೊಡೆದು-ಬೈದು, ಅವನಿಂದ ಅದೆಷ್ಟು ಕೆಲಸವನ್ನು ಮಾಡಿಸಿಕೊಂಡಿರುವಿರಿ! ನಿಮ್ಮ ಭಯದಿಂದ ನಾನು ಎಷ್ಟೋ ಸಲ ಅವನಿಗೆ ಬರಬೇಡವೆಂದು ಸಹ ಹೇಳಿರುವೆನು, ಹೆದರಿಸಿರುವೆನು-ಗದರಿಸಿರು ವೆನು. ಅಷ್ಟಾದರೂ ಹಸಿವೆಯನ್ನು ತಡೆಯಲಾರದೆ ಹೋದಾಗ ಇಲ್ಲಿಗೆ ಓಡಿ ಬರುವನು. ಕೇವಲ ಹೊಟ್ಟೆತುಂಬ ತಿನ್ನಲು ದೊರಕುವುದೆಂಬ ಆಸೆಯಿಂದ ಬರುವನೇ ಹೊರತು ಕಳ್ಳತನ-ದರೋಡೆ-ಮಾಡಲು ಸಲಹೆ ತೆಗೆದುಕೊಳ್ಳುವು ದಕ್ಕಲ್ಲ! ನೀವು ಅದನ್ನು ಸಹ ಸಹಿಸಲಾರದೆ ಹೋದರೆ ನಾನೇನು ಮಾಡ ಲಾಗುವುದು ?" ಎಂದಳು ಹೇಮಾಂಗಿನಿ.

ಈ ಸಲ ನವೀನನೇ ಉತ್ತರಕೊಟ್ಟ. ಅವನು ಕೃಷ್ಣನನ್ನು ಕೈಹಿಡಿದು ದರದರನೆ ಮುಂದಕ್ಕೆಳೆದು ನಿಲ್ಲಿಸಿ, ಅವನ ಪಂಚೆಯ ಒಂದು ತುದಿಯಲ್ಲಿ ಕಟ್ಟಿರಿ ಸಿದ್ದ ಒಂದು 'ದೊನ್ನೆ'ಯನ್ನು ತೆಗೆದು ತೋರಿಸಿ, ಕ್ರೋಧಪೂರ್ಣ ಸ್ವರದಿಂದ "ಬಹೂ! ನಮಗೆ ಅವನನ್ನು ಕಂಡರೆ ಈರ್ಷ್ಯೆ, ಅವನನ್ನು ಸರಿಯಾಗಿ ನೋಡಿ ಕೊಳ್ಳುವುದಿಲ್ಲ-ಎಂದು ಹೇಳಿದೆಯಲ್ಲವೇ ? ಇದೋ ನೋಡು, ಅದರ ಕಾರಣವೇ ನೆಂಬುದನ್ನು ನೀನೇ ಕಣ್ಣಾರೆ ನೋಡು! ನೀನು ಹೇಳಿಕೊಟ್ಟಿರುವುದರ ಫಲವೇ ಇದು! ನಮ್ಮ ರೂಪಾಯನ್ನು ಕದ್ದುಕೊಂಡು ಹೋಗಿ, ನಿನಗೋಸ್ಕರ ಯಾವುದೋ ದೇವಿಯ ಪೂಜೆ ಮಾಡಿಸಿ ಪ್ರಸಾದವನ್ನು ತಂದಿರುವನು ನೋಡಿ ದೆಯಾ ?" ಎಂದು ಕೂಗಾಡುತ್ತ ಆ ದೊನ್ನೆಯಿಂದ ಎರಡು ಸಂದೇಶ, ಸ್ವಲ್ಪ ಹೂವು, ತುಸು ಬಿಲ್ವಪತ್ರ ಮುಂತಾದುವನ್ನು ತೆಗೆದು ತೋರಿಸಿದ.

ಇದೆಲ್ಲವನ್ನೂ ನೋಡಿ ಕಾದಂಬಿನಿಗೆ ಮತ್ತಷ್ಟು ಕೋಪ ಹಾಗೂ ಆಶ್ಚರ್ಯವುಂಟಾಯಿತು. ಅವಳು "ಅಬ್ಬಬ್ಬ! ಎಂತಹ ಧೂರ್ತಹುಡುಗ ನಮ್ಮಾ? ಮಾತನಾಡದೆಯೇ ಎಂತಹ ಕೆಲಸ ಮಾಡಿರುವನು ನೋಡಿದೆಯಾ?

ಬಹೂ! ಈಗ ನೀನೇ ಹೇಳು—ಅವನು ಯಾರಿಗೋಸ್ಕರ ರೂಪಾಯನ್ನು ಕದ್ದನೆಂದು? ನನಗೋಸ್ಕರವೇ?" ಎಂದಳು.

ಮಿತಿಮೀರಿದ ಕೋಪದಿಂದ ಹೇಮಾಂಗಿನಿಗೆ ಏನೂ ತೋರದಾಯಿತು. ಮೊದಲೇ ಅವಳ ದೇಹಸ್ಥಿತಿ ಸರಿಯಾಗಿಲ್ಲ, ಮೇಲಾಗಿ ಈ ಸುಳ್ಳು ದೋಷಾರೋಪಣೆ ಬೇರೆ. ಅವಳು ಆತುರದಿಂದ ಮುಂದೆ ಬಂದು ಕೃಷ್ಣನ ಎರಡು ಕೆನ್ನೆಗಳ ಮೇಲೂ ಚೆನ್ನಾಗಿ ಎರಡೇಟು ಕೊಟ್ಟು "ಕೃತಘ್ನ! ನೀಚ! ಕಳ್ಳ! ನಾನು ನಿನಗೆ ಕಳ್ಳತನ ಮಾಡುವುದನ್ನು ಕಲಿಸಿಕೊಟ್ಟನೇ? ಇಲ್ಲಿಗೆ ಬರಬೇಡವೆಂದು ನಾನು ನಿನಗೆ ಎಷ್ಟು ಸಲ ಹೇಳಿಲ್ಲ? ಬಂದರೂ ಸಹ ಎಷ್ಟು ಸಲ ಒಳಕ್ಕೆ ಸೇರಿಸದೆ ಮನೆಯಿಂದಾಚೆಗೆ ಓಡಿಸಿಲ್ಲ? ಪಾಪಿ! ಕಳ್ಳತನ ಮಾಡುವ ಉದ್ದೇಶದಿಂದಲೇ ನೀನು ಆಗಾಗ ಇಲ್ಲಿಗೆ ಬರುತ್ತಿದ್ದೆಯೆಂದು ಈಗ ನನಗೆನಿಸುವುದು!" ಎಂದಳು.

ಇಷ್ಟೆಲ್ಲ ಗಲಾಟೆಯಾಗುವ ಹೊತ್ತಿಗೆ ಮನೆಯವರೆಲ್ಲರೂ ಅಲ್ಲಿ ಬಂದು ನಿಂತುಬಿಟ್ಟಿದ್ದರು. ಹೇಮಾಂಗಿನಿಯ ಈ ಮಾತನ್ನು ಪುಷ್ಟೀಕರಿಸುತ್ತ ಶಿವನು "ಅಮ್ಮಾ! ಮೊನ್ನೆಯ ದಿನ ರಾತ್ರಿ ಇವನು ನಿಮ್ಮ ಕೊಠಡಿಯ ಬಳಿ ಕತ್ತಲೆಯಲ್ಲಿ ನಿಂತಿದ್ದುದನ್ನು ನಾನು ಕಣ್ಣಾರೆ ನೋಡಿದೆ–ನನ್ನನ್ನು ನೋಡಿದ ಕೂಡಲೇ ಇವನು ಓಡಿ ಹೊರಟುಹೋದ! ಆ ಸಮಯಕ್ಕೆ ಸರಿಯಾಗಿ ನಾನು ಅಲ್ಲಿಗೆ ಬರದಿದ್ದರೆ ಕೊಠಡಿಯನ್ನು ಪ್ರವೇಶಿಸಿ ಖಂಡಿತವಾಗಿಯೂ ಏನಾದರೂ ಕದ್ದುಕೊಂಡು ಹೋಗುತ್ತಿದ್ದ!" ಎಂದು ಹೇಳಿದ.

ಪಾಚುಗೋಪಾಲರೂ ಈ ಮಾತಿಗೆ ಉತ್ತೇಜನಕೊಡುತ್ತ "ಚಿಕ್ಕಮ್ಮನಿಗೆ ಮೈಸರಿಯಾಗಿಲ್ಲವೆಂದು ಅವನಿಗೆ ಗೊತ್ತು, ಆದ್ದರಿಂದಲೇ ಅವನು ಸಂಜೆಯ ಹೊತ್ತಿನಲ್ಲಿ ಬರುವನು! ಅವನೆಂತಹ ಬುದ್ಧಿವಂತ ಗೊತ್ತೇ?" ಎಂದರು.

ಇಂದು ಕೃಷ್ಣನೊಡನೆ ಹೇಮಾಂಗಿನಿಯ ಈ ಪರಿಯ ವ್ಯವಹಾರವನ್ನು ಕಂಡು ಕಾದಂಬಿನಿಗೆ ಹಿಂದಿನ ಹದಿನಾರು ವರ್ಷಗಳಲ್ಲೆಂದೂ ಆಗದಷ್ಟು ಆನಂದವುಂಟಾಯಿತು. ಅವಳು ಸಂತೋಷದಿಂದ "ಹೇಗೆ ಬೆಕ್ಕಿನ ಮರಿಯಂತೆ ನಿಂತಿರುವನು ನೋಡಿದೆಯಾ? ಭಲೆ ಹೇಮಾ! ನೀನು ಇವನನ್ನು ಮನೆಗೆ

ಸಹ ಬರದಂತೆ ಕಟ್ಟುಮಾಡಿರುವೆಯೆಂದು ನನಗೇನು ಗೊತ್ತು? ಚಿಕ್ಕಕ್ಕ ತನ್ನನ್ನು ತಾಯಿಗಿಂತ ಹೆಚ್ಚಾಗಿ ಪ್ರೀತಿಸುವಳು ಎಂದು ಇವನು ಎಲ್ಲರೊಡನೆಯೂ ಹೇಳಿಕೊಳ್ಳುತ್ತ ತಿರುಗುತ್ತಿರುವನು!" ಎಂದು ಹೇಳಿ ಆ ಪ್ರಸಾದವನ್ನೂ ದೊನ್ನೆಯನ್ನೂ ದೂರ ಬಿಸುಟಿ "ಮೂರುರೂಪಾಯಿಗಳನ್ನು ಕದ್ದುಕೊಂಡು ಹೋಗಿ ಎಲ್ಲಿಂದಲೋ ಈ ಎರಡು ಹೂವು-ಎಲೆಗಳನ್ನು ತಂದಿರುವನು. ನೀಚ! ಕೃತಘ್ನ!" ಎಂದಳು.

ಮನೆಗೆ ಕರೆದುಕೊಂಡು ಹೋಗಿ ನವೀನ ಕೃಷ್ಣನನ್ನು ದಂಡಿಸಲು ಸುರುಮಾಡಿದ. ಅವನ ಮೇಲೆ ನಿರ್ದಯ ಪ್ರಹಾರಗಳು ಆರಂಭವಾದುವು. ಅಷ್ಟಾದರೂ ಅವನು ಬಾಯಿಂದ ಒಂದು ಮಾತು ಸಹ ಆಡಲಿಲ್ಲ. ಅಳಲೂ ಇಲ್ಲ. ಈ ಕಡೆಗೆ ಹೊಡೆದರೆ ಆ ಕಡೆಗೆ ಮುಖವನ್ನು ತಿರುಗಿಸಿಕೊಳ್ಳುತ್ತಿದ್ದ. ಆ ಕಡೆಗೆ ಹೊಡೆದರೆ ಈ ಕಡೆಗೆ ಮುಖವನ್ನು ತಿರುಗಿಸಿಕೊಳ್ಳುತ್ತಿದ್ದ. ಅಂತೂ ಆ ದಿವಸ ಬಹಳ ಏಟು ತಿಂದ ಕೃಷ್ಣ. ಇದನ್ನು ಕಂಡು ಇವನಿಗೆ ಏಟು ತಿಂದು ಅಭ್ಯಾಸವಿರಬೇಕೆಂದು ಕಾದಂಬಿನಿ ಊಹಿಸಿದಳು. ಆದರೆ ಆ ಏನೂ ಅರಿಯದ ಬಾಲಕನ ಮೇಲೆ ಇದುವರೆಗೆ ಯಾರೂ ಕೈಯೆತ್ತಿರಲಿಲ್ಲವೆಂಬುದು ಪರಮಾತ್ಮನಿಗೇ ಗೊತ್ತು!

ಹೇಮಾಂಗಿನಿ ತನ್ನ ಕೊಠಡಿಯ ಎಲ್ಲ ಕಿಟಕಿಗಳನ್ನೂ ಮುಚ್ಚಿ ಮರದ ಬೊಂಬೆಯಂತೆ ಸುಮ್ಮನೆ ಕುಳಿತಿದ್ದಳು. ಉಮಾ ಕಾದಂಬಿನಿಯ ಮನೆಗೆ ಹೋಗಿದ್ದಳು-ಕೃಷ್ಣನನ್ನು ಹೊಡೆಯುತ್ತಿರುವದನ್ನು ನೋಡುವುದಕ್ಕೆ! ಅಲ್ಲಿಂದ ಹಿಂತಿರುಗಿ ಬಂದು ಅವಳು "ಅಮ್ಮಾ! ಕೃಷ್ಣಮಾವ ದೊಡ್ಡವನಾದರೆ ದೊಡ್ಡ ಕಳ್ಳನಾಗುವನೆಂದು ದೊಡ್ಡಮ್ಮ ಹೇಳುವರು. ಅವನ ಊರಿನಲ್ಲಿ ಯಾವುದೋ ಒಂದು ದೇವತೆ............" ಎಂದಳು.

"ಉಮಾ!"

ತನ್ನ ತಾಯಿಯ ಈ ಪರಿಯ ಗದ್ಗದ ಹಾಗು ಭಗ್ನ ಸ್ವರವನ್ನು ಕೇಳಿ ಉಮಾ ಚಕಿತಳಾದಳು. ಅವಳು ತಾಯಿಯ ಸಮೀಪಕ್ಕೆ ಬಂದು ಹೆದರುತ್ತ ಹೆದರುತ್ತ "ಏನಮ್ಮಾ!" ಎಂದು ಕೇಳಿದಳು.

"ಉಮಾ! ಅವರೆಲ್ಲರೂ ಸೇರಿಕೊಂಡು ಇನ್ನೂ ಅವನನ್ನು ಹೊಡೆಯುತ್ತಿರುವರೇ?" ಎಂದು ಕೇಳಿ ಹೇಮಾಂಗಿನಿಯು ಮುಖ ಕೆಳಗೆ ಮಾಡಿ ನೆಲದ

ಮೇಲೆ ಉರುಳಿಕೊಂಡು ಅಳತೊಡಗಿದಳು. ತಾಯಿ ಅಳುವುದನ್ನು ಕಂಡು ಉಮಾ ಸಹ ಅಳಲಾರಂಭಿಸಿದಳು. ಸ್ವಲ್ಪ ಹೊತ್ತಿನ ಬಳಿಕ ಅವಳು ತಾಯಿಯ ಹತ್ತಿರ ಕುಳಿತುಕೊಂಡು ಸೆರಗಿನಿಂದ ಅವಳ ಕಣ್ಣೀರೊರೆಸುತ್ತ "ಇಲ್ಲ ಅಮ್ಮಾ! ದಾದಿಯು ಅವನನ್ನು ಹೊರಕ್ಕೆ ಕರೆದುಕೊಂಡು ಹೊರಟುಹೋದಳು." ಎಂದು ಹೇಳಿದಳು.

ಹೇಮಾಂಗಿನಿ ಪುನಃ ಏನೂ ಹೇಳಲಿಲ್ಲ. ಸುಮ್ಮನೆ ಅಲ್ಲೇ ಮಲಗಿದ್ದಳು. ಮಧ್ಯಾಹ್ನ ಎರಡು ಮೂರು ಗಂಟೆಯ ಹೊತ್ತಿಗೆ ಅವಳಿಗೆ ಬಹಳವಾದ ಚಳಿ-ಜ್ವರ ಬಂತು. ಅನೇಕ ದಿನಗಳ ನಂತರ ಈ ದಿವಸ ಅವಳು ಪಥ್ಯ ತೆಗೆದುಕೊಳ್ಳಲು ಕುಳಿತುಕೊಂಡಳು—ಆದರೆ ಪಥ್ಯವು ಒಂದು ಮೂಲೆಯಲ್ಲಿ ಒಣಗುತ್ತ ಬಿದ್ದಿತ್ತು. ಸಂಜೆಯ ನಂತರ ವಿಪಿನ ಆ ಮನೆಗೆ ಹೋಗಿ, ಅತ್ತಿಗೆಯಿಂದ ಎಲ್ಲ ವಿಚಾರವನ್ನೂ ತಿಳಿದುಕೊಂಡು ಸಿಟ್ಟಿನಿಂದ ತನ್ನ ಕೊಠಡಿಯನ್ನು ಪ್ರವೇಶಿಸುತ್ತಿದ್ದ. ಆಗ ಉಮಾ ಅವನ ಬಳಿಗೆ ಹೋಗಿ ಮೆಲುದನಿಯಲ್ಲಿ "ಅಮ್ಮ ಜ್ವರದಿಂದ ನರಳುತ್ತ ಪ್ರಜ್ಞೆ ಇಲ್ಲದೆ ಬಿದ್ದಿರುವಳು" ಎಂದು ಹೇಳಿದಳು.

ವಿಪಿನ ಚಕಿತನಾಗಿ "ಹಾ! ಪುನಃ ಜ್ವರವೇ? ಈಗ ನಾಲ್ಕೈದು ದಿವಸಗಳಿಂದ ಏನೂ ಇರಲಿಲ್ಲವಲ್ಲ?" ಎಂದ.

ವಿಪಿನ ಮನಃಪೂರ್ವಕವಾಗಿ ತನ್ನ ಪತ್ನಿಯನ್ನು ಬಹಳ ಪ್ರೀತಿಸುತ್ತಿದ್ದ. ಅವಳನ್ನು ಅವನು ಎಷ್ಟು ಪ್ರೀತಿಸುವನೆಂಬುದು ಈಗ ನಾಲ್ಕೈದು ವರ್ಷಗಳ ಹಿಂದೆ ಅಣ್ಣ ಮತ್ತು ಅತ್ತಿಗೆಯರಿಂದ ಬೇರೆಯಾದಾಗ ವ್ಯಕ್ತವಾಗಿತ್ತು. ಅವನು ಗಾಬರಿಯಿಂದ ಕೊಠಡಿಯನ್ನು ಹೊಕ್ಕು ನೋಡಿದ—ಅವಳು ಇನ್ನೂ ನೆಲದ ಮೇಲೇ ಮಲಗಿದ್ದಳು. ಬಹಳ ಚಿಂತಾಕುಲನಾದ. ಮಂಚದ ಮೇಲೆ ಮಲಗಿಸಬೇಕೆಂದು ಅವಳನ್ನು ಹಿಡಿದೆತ್ತಲು ಹೋದ. ಆದರೆ ಅವನ ಸ್ಪರ್ಶವಾದೊಡನೆಯೇ ಅವಳು ಕಣ್ಣುತೆರೆದಳು. ಸ್ವಲ್ಪ ಹೊತ್ತಿನವರೆಗೆ ಅವನನ್ನೇ ದಿಟ್ಟಿಸುತ್ತಿದ್ದು, ನಂತರ ಅವಳು ಅವನ ಎರಡು ಕಾಲುಗಳನ್ನೂ ಹಿಡಿದುಕೊಂಡು ಅಳುತ್ತ "ಕೃಷ್ಣನಿಗೆ ಆಶ್ರಯ ಕೊಟ್ಟು ಬಿಡಿ! ಇಲ್ಲದಿದ್ದರೆ ನನ್ನ ಈ ಜ್ವರ ವಾಸಿಯಾಗುವುದಿಲ್ಲ! ದುರ್ಗಾದೇವಿಯು ನನ್ನನ್ನು ಯಾವ ರೀತಿಯಿಂದಲೂ ಕ್ಷಮಿಸುವುದಿಲ್ಲ!" ಎಂದು ಹೇಳಿದಳು.

ವಿಪಿನ ತನ್ನ ಕಾಲುಗಳನ್ನು ಬಿಡಿಸಿಕೊಂಡು ಅವಳ ಬಳಿ ಕುಳಿತು ಕೊಂಡ. ನಂತರ ಪ್ರೀತಿಯಿಂದ ಅವಳ ತಲೆಯ ಮೇಲೆ ಕೈಯಾಡಿಸುತ್ತ ಅವಳನ್ನು ಸಮಾಧಾನಪಡಿಸತೊಡಗಿದ. ಹೇಮಾಂಗಿನಿಯು ಅವನ ಮುಖವ ಕಡೆಗೆ ದೀನದೃಷ್ಟಿಯಿಂದ ನೋಡುತ್ತ "ಆಶ್ರಯ ಕೊಡುವಿರಾ?" ಎಂದು ಕೇಳಿದಳು.

ವಿಪಿನ ತನ್ನ ಕೈಯಿಂದ ಅವಳ ಕಣ್ಣೀರೊರೆಸುತ್ತ "ನಿನ್ನ ಇಷ್ಟದಂತೆ ಎಲ್ಲವನ್ನೂ ಮಾಡುವೆನು. ಮೊದಲು ನೀನು ಸ್ವಸ್ಥಳಾಗು!" ಎಂದ. ಬಳಿಕ ಹೇಮಾಂಗಿನಿ ಮತ್ತೇನೂ ಮಾತನಾಡದೆ ಮಂಚದ ಮೇಲೆ ಹೋಗಿ ಮಲಗಿ ಕೊಂಡಳು; ರಾತ್ರಿಯ ಹೊತ್ತಿಗೇ ಅವಳಿಗೆ ಜ್ವರ ಇಳಿದು ಹೋಯಿತು. ಮರು ದಿನ ಬೆಳಿಗ್ಗೆ ಅವಳಿಗೆ ಜ್ವರವಿಲ್ಲದುದನ್ನು ಕಂಡು ವಿಪಿನ ಬಹಳ ಪ್ರಸನ್ನನಾದ. ಸ್ನಾನ-ಪಾನಾದಿಗಳನ್ನು ಮುಗಿಸಿಕೊಂಡು, ಕಾಫಿ ತಿಂಡಿಯಾದನಂತರ ಅವನು ಅಂಗಡಿಗೆ ಹೋಗುತ್ತಿರುವಾಗ ಹೇಮಾಂಗಿನಿಯು ಅವನ ಬಳಿಗೆ ಹೋಗಿ ನಿಂತು "ಏಟಿನ ವೇಗವನ್ನು ತಡೆಯಲಾರದೆ ಕೃಷ್ಣನಿಗೆ ಬಹಳವಾಗಿ ಜ್ವರ ಬಂದುಬಿಟ್ಟಿದೆ. ನಾನು ಅವನನ್ನು ಇಲ್ಲಿಗೆ ಕರೆದುಕೊಂಡು ಬರುವೆನು" ಎಂದು ಹೇಳಿದಳು.

ವಿಪಿನ ಮನಸ್ಸಿನಲ್ಲೇ ವಿರಕ್ತನಾಗಿ "ಅವನನ್ನು ಇಲ್ಲಿಗೆ ಕರೆತರುವ ಆವಶ್ಯಕತೆಯಾದರೂ ಏನು? ಅಲ್ಲೇ ಇರಲಿ ಬಿಡು!" ಎಂದ.

ಹೇಮಾಂಗಿನಿ ಸ್ವಲ್ಪ ಹೊತ್ತು ಸ್ತಬ್ಧಳಾಗಿ ನಿಂತು ಬಳಿಕ "ಅವನಿಗೆ ಆಶ್ರಯ ಕೊಡುವೆನೆಂದು ನಿನ್ನೆ ರಾತ್ರಿ ನೀವು ವಚನ ಕೊಡಲಿಲ್ಲವೇ?" ಎಂದು ಕೇಳಿದಳು.

ವಿಪಿನ ಸ್ವಲ್ಪ ಅಲಕ್ಷ್ಯ ಭಾವದಿಂದ "ಅವನನ್ನು ಮನೆಗೆ ಕರೆತಂದು ಸಾಕಿ ಸಲಹಲು ಅವನಾರೆಂದು ತಿಳಿದಿರುವೆ? ಭಲೆ, ನೀನೂ ಸರಿಯೆ!" ಎಂದ.

ನಿನ್ನೆಯ ರಾತ್ರಿ ತನ್ನ ಪತ್ನಿಯು ಬಹಳ ಅಸ್ವಸ್ಥಳಾಗಿದ್ದುದನ್ನು ಕಂಡು ಯಾವ ವಿಚಾರವಾಗಿ ವಾಗ್ದಾನ ಮಾಡಿದ್ದನೋ ಅದೇ ವಿಚಾರವನ್ನು ಈ ದಿವಸ ಅವಳು ಸ್ವಸ್ಥಳಾಗಿದ್ದುದರಿಂದ ಮಾಡಲು ಹಿಂಜರಿದ. ಅವನು ಕೊಡೆ

ಯನ್ನು ಕಂಕುಳಲ್ಲಿರಿಸಿಕೊಂಡು ಎದ್ದು ನಿಂತು "ಹುಚ್ಚಿಯಂತೆ ಮಾತಾಡ ಬೇಡ! ಅಣ್ಣ ಮತ್ತು ಅತ್ತಿಗೆಯರು ಬಹಳ ಕೋಪಗೊಳ್ಳುವರು" ಎಂದ.

ಹೇಮಾಂಗಿನಿ ಶಾಂತ ಮತ್ತು ದೃಢ ಸ್ವರದಿಂದ "ಅವರು ಕೋಪ ಗೊಂಡು ಮಾಡುವುದಾದರೂ ಏನು? ಅವನನ್ನು ಕೊಂದುಹಾಕಿ ಬಿಡುವರೇ? ನಾನು ಅವನನ್ನು ಕರೆದುಕೊಂಡು ಬರುವೆನು. ನನ್ನನ್ನು ಯಾರು ತಡೆಯು ವರೋ ನೋಡುವೆನು! ಇದುವರೆಗೂ ನನಗೆ ಇಬ್ಬರು ಮಕ್ಕಳಿದ್ದರು, ನಾಳೆ ಯಿಂದ ಮೂರು ಮಂದಿಯಾದರು. ನಾನು ಕೃಷ್ಣನ ತಾಯಿ!" ಎಂದಳು.

"ಆಗಲಿ, ನೋಡೋಣ!" ಎಂದು ಹೇಳಿ ವಿಪಿನ ಹೊರಟುಹೋಗು ವುದರಲ್ಲಿದ್ದ. ಅಷ್ಟರಲ್ಲಿ ಹೇಮಾಂಗಿನಿ ಅವನೆದುರಿಗೆ ಬಂದು ನಿಂತು "ಏಕೆ, ಅವನನ್ನು ಈ ಮನೆಗೆ ಕರೆತರಗೊಡುವುದಿಲ್ಲವೇ?" ಎಂದು ಕೇಳಿದಳು.

"ಹೋಗು! ಏಕೆ ಹುಚ್ಚಿಯಂತಾಡುವೆ?" ಎಂದು ಗದರಿಸಿ ವಿಪಿನ ಅಲ್ಲಿಂದ ಹೊರಟುಹೋದ.

ಹೇಮಾಂಗಿನಿಯು ಶಿವನನ್ನು ಕರೆದು "ಶಿವ! ಹೋಗು, ಒಂದು ಎತ್ತಿನ ಗಾಡಿಯನ್ನು ಕರೆದುಕೊಂಡು ಬಾ! ನಾನು ನನ್ನ ತವರುಮನೆಗೆ ಹೋಗು ವೆನು" ಎಂದಳು.

"ಓಹೋ! ಹೆದರಿಕೆ ತೋರಿಸುತ್ತೀಯಾ?" ಎಂದು ನಕ್ಕು, ವಿಪಿನ ಅಂಗಡಿಗೆ ಹೊರಟುಹೋದ.

ಕೃಷ್ಣ ಚಂಡೀ ಮಂಟಪದ ಬಳಿ ಜ್ವರದಿಂದ ನರಳುತ್ತ, ಶಾರೀರಿಕ ಹಾಗು ಮಾನಸಿಕ ವೇದನೆಯನ್ನನುಭವಿಸುತ್ತ ಒಂದು ಹರಕು ಚಾಪೆಯ ಮೇಲೆ ಪ್ರಜ್ಞೆ ಇಲ್ಲದಂತೆ ಬಿದ್ದಿದ್ದ. ಹೇಮಾಂಗಿನಿಯು "ಕೃಷ್ಣ!" ಎಂದು ಕೂಗಿದಳು.

ಮೊದಲಿನಿಂದಲೇ ಸಿದ್ಧನಾಗಿದ್ದನೋ ಎಂಬಂತೆ ಒಡನೆಯೇ ಕೃಷ್ಣ ಎದ್ದು ನಿಂತು "ಚಿಕ್ಕಕ್ಕ!" ಎಂದ. ನಂತರ ಲಜ್ಜಾಪೂರ್ಣ ಮಂದಹಾಸ ದಿಂದ ಅವನ ಮುಖವು ಅರಳಿತು. ತನ್ನ ಶರೀರದ ಅಸ್ವಸ್ಥತೆಯನ್ನು ಸಹ ಮರೆತು ಅತ್ಯುತ್ಸಾಹದಿಂದ ಎದ್ದು ನಿಂತು ದುಪ್ಪಟಿಯ ಒಂದು ತುದಿಯಿಂದ ಆ ಹರಕು ಚಾಪೆಯನ್ನು ಹಾಸುತ್ತ "ಕುಳಿತುಕೋ!" ಎಂದು ಹೇಳಿದ.

ಹೇಮಾಂಗಿನಿಯು ಅವನ ಕೈ ಹಿಡಿದು ಹತ್ತಿರ ಎಳೆದುಕೊಂಡಳು. ಅವನನ್ನು ಪ್ರೀತಿಯಿಂದ ಎದೆಗಪ್ಪಿಕೊಂಡು "ಇಲ್ಲ ಕೃಷ್ಣ! ಈಗ ನಾನು ಕುಳಿತುಕೊಳ್ಳುವುದಿಲ್ಲ. ನೀನು ನನ್ನ ಸಂಗಡ ನಡೆ. ಈ ದಿವಸ ನನ್ನನ್ನು ನಮ್ಮ ತವರು ಮನೆಗೆ ಸೇರಿಸಿ ಬರುವ ಕೆಲಸ ನಿನ್ನದು!" ಎಂದಳು.

"ನಡೆ!" ಎಂದು ಹೇಳಿ ತನ್ನ ಮುರುಕು ಚತ್ರವನ್ನು ಕೈಲಿ ಹಿಡಿದು, ಹರುಕು ಅಂಗವಸ್ತ್ರವನ್ನು ಹೆಗಲ ಮೇಲೆ ಹಾಕಿಕೊಂಡು ಅಲ್ಲಿಂದ ಹೊರಟ ಕೃಷ್ಣ.

ಹೇಮಾಂಗಿನಿಯು ಮನೆಯ ಮುಂದೆ ಎತ್ತಿನ ಗಾಡಿ ನಿಂತಿತ್ತು. ಕೃಷ್ಣನನ್ನು ಸಂಗಡ ಕರೆದುಕೊಂಡು ಹೇಮಾಂಗಿನಿ ಗಾಡಿಯನ್ನೇರಿ ಕುಳಿತಳು. ಗಾಡಿ ಊರ ಹೊರಭಾಗವನ್ನು ಸೇರಿದಾಗ ಹಿಂದಿನಿಂದ ಯಾರೋ ಕೂಗುತ್ತಿರುವಂತೆ ಕೇಳಿಬಂದಿತು. ಗಾಡಿಯವನು ಗಾಡಿಯನ್ನು ನಿಲ್ಲಿಸಿದ. ವಿಪಿನ ಆತುರದಿಂದ ಓಡಿಬರುತ್ತಿದ್ದ. ಅವನ ಮುಖ ಮತ್ತು ಶರೀರವೆಲ್ಲ ಬೆವರಿನಿಂದ ತೊಯ್ದುಹೋಗಿದ್ದುವು. ಮುಖ ಕೆಂಪಾಗಿ ಹೋಗಿತ್ತು. ಅವನು ಅವಳ ಸಮೀಪಕ್ಕೆ ಬಂದು ಹೆವರುತ್ತ ಹೆದರುತ್ತ "ಎಲ್ಲಿಗೆ ಹೋಗುತ್ತಿರುವೆ?" ಎಂದು ಕೇಳಿದ.

ಹೇಮಾಂಗಿನಿಯು ಕೃಷ್ಣನ ಕಡೆಗೆ ಕೈತೋರಿಸಿ "ಇವನ ಊರಿಗೆ ಹೋಗುವೆನು" ಎಂದಳು.

"ಯಾವಾಗ ಹಿಂದಿರುಗುವಿ"?

ಹೇಮಾಂಗಿನಿಯು ದೃಢ-ಗಂಭೀರ ಸ್ವರದಿಂದ "ಪರಮಾತ್ಮ ಯಾವಾಗ ಹಿಂತಿರುಗಿಸುವನೊ ಆವಾಗ!" ಎಂದಳು.

"ಹಾಗೆಂದರೇನು?"

ಹೇಮಾಂಗಿನಿ ಪುನಃ ಕೃಷ್ಣನನ್ನು ತೋರಿಸುತ್ತ "ಇವನಿಗೆ ಎಲ್ಲಾದರೂ ಸರಿಯಾದ ಆಶ್ರಯ ಸಿಕ್ಕಿದ ಬಳಿಕಲ್ಲವೇ ನಾನು ಒಂಟಿಯಾಗಿ ಹಿಂತಿರುಗಬೇಕು? ಇಲ್ಲದಿದ್ದರೆ ಇವನ ಸಂಗಡಲೇ ಇರಬೇಕಾಗುವುದು" ಎಂದು ಹೇಳಿದಳು.